ವಿಜ್ಞಾನ ದೀಪಮಾಲೆ

# ಜೋಸೆಫ್ ಲಿಸ್ಟರ್

ಡಾ. ಎಚ್.ಡಿ. ಚಂದ್ರಪ್ಪಗೌ



ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು

ವಿಜ್ಞಾನ ದೀಪಮಾಲೆ

# ಜೋಸೆಫ್ ಲಿಸ್ಟರ್

ಡಾ॥ ಎಚ್.ಡಿ. ಚಂದ್ರಪ್ಪಗೌಡ

ಕರ್ನಾಟಕ ಸರ್ಕಾರ
ಕನ್ನಡ ಪುಸ್ತಕ ಪ್ರಾಧಿಕಾರ
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು - ೫೬೦ ೦೧೮

**JOSEPH LISTER** : a book on the life and work of Joseph Lister by Dr. H.D. Chandrappa Gowda Published by Kannada Pustaka Pradhikara ( Kannada Book Authority) Pampa Mahakavi Road, Chamarajpet, Bangalore - 560 018



ಪ್ರಥಮ ಮುದ್ರಣ : ೧೯೯೫

ದ್ವಿತೀಯ ಮುದ್ರಣ : ೧೯೯೭

ತೃತೀಯ ಮುದ್ರಣ : ೧೯೯೮

ಬೆಲೆ : ರೂ. ೨೨ (ಇಪ್ಪತ್ತೆರಡು ರೂಗಳು)

ಮುದ್ರಣ :

**ಸತ್ಯಶ್ರೀ ಪ್ರಿಂಟರ್ಸ್ ಪ್ರೈ.ಲಿ.,**

**ಚಾಮರಾಜಪೇಟೆ**

**ಬೆಂಗಳೂರು - ೧೮**

**ದೂರವಾಣಿ : ೬೨೫೭೩೬**

ಡಾ॥ಎಚ್. ಡಿ. ಚಂದ್ರಪ್ಪಗೌಡ (ಜನನ ೧೯೨೯) ಅವರು ಎಂ.ಬಿ.ಬಿ.ಎಸ್. ಮತ್ತು ಎಂ.ಎಸ್. ಪದವಿಗಳನ್ನು ಪಡೆದು ಕರ್ನಾಟಕ ಸರ್ಕಾರದ ಆರೋಗ್ಯ ಇಲಾಖೆಯಲ್ಲಿ ವಿವಿಧ ಶ್ರೇಣಿಗಳ ಹುದ್ದೆಗಳಲ್ಲಿ ೨೯ ವರ್ಷಗಳು ಕಾರ್ಯ ನಿರ್ವಹಿಸಿರುತ್ತಾರೆ. ಇವರು ಜಿಲ್ಲಾ ವೈದ್ಯಾಧಿಕಾರಿಗಳಾಗಿ ೧೯೮೪ ರಲ್ಲಿ ನಿವೃತ್ತಿ ಹೊಂದಿರುತ್ತಾರೆ. ೧೯೮೪ ರಿಂದ ಖಾಸಗಿಯಾಗಿ ತಮ್ಮ ವೃತ್ತಿಯನ್ನು ಮುಂದುವರಿಸುತ್ತಿದ್ದಾರೆ.

ಇವರು ೧೯೪೭ರಲ್ಲಿ 'ಮೈಸೂರು ಚಲೋ' ಚಳವಳಿಯಲ್ಲಿ ಭಾಗವಹಿಸಿ ಜೈಲುವಾಸ ಅನುಭವಿಸಿದ್ದಾರೆ. ೧೯೮೪-೮೫ ರಲ್ಲಿ ' ಪರಿಸರ ಸಂರಕ್ಷಣಾವೇದಿಕೆ'ಯನ್ನು ಸ್ಥಾಪಿಸಿ "ಪಶ್ಚಿಮ ಘಟ್ಟ ಉಳಿಸಿ" ಆಂದೋಲನದಲ್ಲಿ ಸಕ್ರಿಯ ಪಾತ್ರ. ಇಂಡಿಯನ್ ಮೆಡಿಕಲ್ ಅಸೋಸಿಯೇಷನ್, ಇಂಡಿಯನ್ ಸರ್ಜನ್ಸ್ ಅಸೋಸಿಯೇಷನ್‌ಗಳ ಸದಸ್ಯತ್ವ ಹೊಂದಿದ್ದು ಕರ್ನಾಟಕ ಪೋಸ್ಟ್ ಗ್ರಾಜುಯೇಟ್ ಮೆಡಿಕಲ್ ಅಸೋಸಿಯೇಷನ್, ಸ್ಥಾಪಕ ಸದಸ್ಯರಾಗಿ, ಕಾರ್ಯದರ್ಶಿ, ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿರುತ್ತಾರೆ. ಜನಪ್ರಿಯ ವೈದ್ಯಕೀಯಕ್ಕೆ ಸಂಬಂಧಿಸಿದ ಇವರ ಹತ್ತು ಕೃತಿಗಳು ಹಾಗೂ ೧೨೫ ಬಿಡಿ ಲೇಖನಗಳು ಪ್ರಕಟಗೊಂಡಿವೆ. ಇವರ ವೈದ್ಯಕೀಯ ಲೇಖನಗಳಿಗೆ ಮೈಸೂರಿನ ಶ್ರೀಮತಿ ಯಮುನಾಬಾಯಿ ಸ್ಮಾರಕ ಬಹುಮಾನ (೧೯೮೭) ಹಾಗೂ ಇಂಡಿಯನ್ ಸೈಕಿಯಾಟ್ರಿಕ್ ಸೊಸೈಟಿಯವರ ಡಾ॥ಜಯರಾಮ್ ಅವಾರ್ಡ್ (೧೯೯೧-೯೨) ಲಭಿಸಿವೆ.

# ಪರಿವಿಡಿ

# ಮುನ್ನುಡಿ

"ತೊಟ್ಟಿಲಿನಿಂದ ಗೋರಿಯವರೆಗೆ ಒಬ್ಬ ಭಾರತೀಯ ಅನೇಕಾನೇಕ ಭಾಷೆಗಳನ್ನು ಕಲಿಯ ಬೇಕಾಗಿ ಬಂದಿದೆ. ಈ ಯಾವುದೇ ಪರಕೀಯ ಭಾಷೆಗಳನ್ನು ಅರಗಿಸಿಕೊಂಡು ಅವುಗಳ ಸೂಕ್ಷ್ಮತೆಗಳನ್ನೆಲ್ಲಾ ಕರಗತಮಾಡಿಕೊಳ್ಳುವ ಹೊತ್ತಿಗೆ ಆತನ ಭೂಗೋಳ, ರಸಾಯನಶಾಸ್ತ್ರ, ಭೌತಶಾಸ್ತ್ರ ಮುಂತಾದವುಗಳ ಪರಿಚಯವು ಸಂಪೂರ್ಣತೆಯನ್ನು ತಲುಪುವುದೇ ಇಲ್ಲ" - ಡಾ || ರಾಮಮನೋಹರ ಲೋಹಿಯಾ.

ಸಂಸ್ಕೃತಿ ಮತ್ತು ನಾಗರಿಕತೆಯ ಜೊತೆಜೊತೆಗೆ ವಿಜ್ಞಾನ ಮತ್ತು ತಂತ್ರಜ್ಞಾನ ಇಂದು ಮನುಕುಲದ ಅವಿಭಾಜ್ಯ ಅಂಗವಾಗಿದೆ. ಕಳೆದ ನೂರು ವರ್ಷಗಳಲ್ಲಿ ವೈಜ್ಞಾನಿಕ ಮತ್ತು ತಾಂತ್ರಿಕ ಕ್ಷೇತ್ರಗಳಲ್ಲಿ ಆಗಿರುವ ಅದ್ಭುತ ಪ್ರಗತಿ ಮಾನವ ಇತಿಹಾಸದ ಐದು ಸಾವಿರ ವರ್ಷಗಳಲ್ಲಿ ಕಂಡರಿಯದ್ದು; ಕೇಳರಿಯದ್ದು. ಜನಸಮುದಾಯ ಬಳಸಿ ಅನುಭವಿಸುವ ಅನೇಕ ಸೌಲಭ್ಯಗಳ ಹಿಂದೆ ಎಷ್ಟೊಂದು ವಿಜ್ಞಾನಿಗಳ ಎಲೆ ಮರೆಯ ಸೇವೆ ಹಾಗೂ ತ್ಯಾಗಮಯ ಜೀವನ ಇದೆ ಎನ್ನುವುದು ಬಹಳ ಜನರ ಅರಿವಿಗೆ ಬರುವುದೇ ಇಲ್ಲ.

ಕನ್ನಡದಲ್ಲಿ ವಿಜ್ಞಾನ ಸಾಹಿತ್ಯದ ಬೆಳವಣಿಗೆ ತೀವ್ರವಾಗಿ ಆಗಬೇಕೆಂಬ ಉದ್ದೇಶದಿಂದ ಕರ್ನಾಟಕ ಸರ್ಕಾರ ನೂರು ವಿಜ್ಞಾನಿಗಳ ಜೀವನ, ಸಾಧನೆ ಕುರಿತ ಕೃತಿಗಳನ್ನು ಮೊದಲ ಹಂತದಲ್ಲಿ ಪ್ರಕಟಿಸಲು ಪ್ರಾಧಿಕಾರಕ್ಕೆ ಜವಾಬ್ದಾರಿ ವಹಿಸಿತು. ತಿರುಳ್ಗನ್ನಡದಲ್ಲಿ ಪ್ರಸಿದ್ಧ ವಿದ್ವಾಂಸರಿಂದ ವಿಜ್ಞಾನಿಗಳ ಜೀವನ ಚರಿತ್ರೆಯನ್ನು ಬರೆಸಿ ಪ್ರಕಟಿಸುವ ಯೋಜನೆಯನ್ನು ಪ್ರಾಧಿಕಾರವು ಹಮ್ಮಿಕೊಂಡಿದೆ.

ವಿಜ್ಞಾನ ದೀಪಮಾಲೆಯಲ್ಲಿ ಈಗಾಗಲೇ ಅನೇಕ ಕೃತಿಗಳು ಪ್ರಕಟವಾಗಿದೆ. ಸುಮಾರು ೨೦೦೦ ಪುಟಗಳನ್ನೊಳಗೊಂಡ ಈ ಕೃತಿಗಳಲ್ಲಿ ವಿಜ್ಞಾನಿಗಳ ಜೀವನ ಚಿತ್ರಣದ ಜೊತೆಗೆ ಅವರ ವೈಜ್ಞಾನಿಕ ಚಿಂತನೆ ಹಾಗೂ ಕೊಡುಗೆಗಳನ್ನು ಸರಳ ಕನ್ನಡದಲ್ಲಿ ವಿವರಿಸಲಾಗಿದೆ. ಈ ಕೃತಿಗಳು ಜನಸಾಮಾನ್ಯರಿಗಲ್ಲದೆ ವಿದ್ಯಾರ್ಥಿಗಳ ಅಧ್ಯಯನಕ್ಕೆ ಪೂರಕವೂ ಆಗಿವೆ. ಜನಮನ್ನಣೆ ಗಳಿಸುತ್ತಿರುವ ಈ ಮಾಲೆಯನ್ನು ಕನ್ನಡಿಗರು ತುಂಬು ಮನಸ್ಸಿನಿಂದ ಸ್ವಾಗತಿಸುತ್ತಾರೆಂಬ ನಂಬಿಕೆ ನನಗಿದೆ.

ನಮ್ಮ ಪ್ರಾಧಿಕಾರದ ಕರೆಗೆ ಮನ್ನಣೆ ನೀಡಿ ಜೊಸೆಫ್ ಲಿಸ್ಟರ್ ಕೃತಿಯನ್ನು ಬರೆದು ಕೊಟ್ಟ ಡಾ॥ ಎಚ್. ಡಿ. ಚಂದ್ರಪ್ಪಗೌಡ ಅವರಿಗೆ ಕೃತಜ್ಞತೆಗಳು. ಅಂದವಾಗಿ ಮುದ್ರಿಸಿ ಕೊಟ್ಟ ಸತ್ಯಶ್ರೀ ಪ್ರಿಂಟರ್ಸ್ ಪ್ರೈ.ಲಿ. ಅವರಿಗೂ ವಂದನೆಗಳು.

ಈ ಮಾಲೆಯ ಪುಸ್ತಕಗಳನ್ನು ಹೊರತರುವಲ್ಲಿ ಸಹಕಾರ ನೀಡುತ್ತಿರುವ ಪ್ರಾಧಿಕಾರದ ಸದಸ್ಯರನ್ನೂ, ವಿಜ್ಞಾನ ದೀಪಮಾಲೆಯ ಸದಸ್ಯರನ್ನೂ ನೆನೆಯುತ್ತೇನೆ. ಮತ್ತೊಮ್ಮೆ ಕನ್ನಡ ಬಂಧುಗಳ ಸಲಹೆ ಹಾಗೂ ಸಹಕಾರವನ್ನು ಕೋರುತ್ತೇನೆ.

**ನೆಲಮನೆ ದೇವೇಗೌಡ**
ಅಧ್ಯಕ್ಷರು
ಕನ್ನಡ ಪುಸ್ತಕ ಪ್ರಾಧಿಕಾರ

# ೧. ಕಿಟಕಿ ಬಾಗಿಲು ಮುಚ್ಚಿ, ಮಿಣಿ ಜೀವಿಗಳು ಒಳಗೆ ಬಂದಾವು !

ಲಂಡನ್ ನಗರದ ಕಿಂಗ್ಸ್ ಮೆಡಿಕಲ್ ಕಾಲೇಜಿನ ತರಗತಿಯೊಂದರ ವಿಶಾಲ ಕೊಠಡಿ; ಸುಮಾರು ಒಂದು ನೂರಕ್ಕಿಂತಲೂ ಹೆಚ್ಚು ವೈದ್ಯ ವಿದ್ಯಾರ್ಥಿಗಳಿರಬೇಕಾಗಿದ್ದ ಆ ಕೊಠಡಿಯಲ್ಲಿ ಆ ದಿನ ಕೇವಲ 15-20 ಜನ ಮಾತ್ರ ಕುಳಿತಿದ್ದಾರೆ. ಎಡಿನ್ ಬರೋದಿಂದ ಹೊಸದಾಗಿ ಬಂದಿರುವ ಪ್ರೊಫೆಸರನ್ನು ಮೊದಲ ದಿನ ಸ್ವಾಗತಿಸುವ ಸಲುವಾಗಿ; ವೇದಿಕೆಯ ಟೇಬಲ್ ಮೇಲೆ ಜೋಡಿಸಿಟ್ಟ ಕೆಲವು ಗಾಜಿನ ಬೀಕರ್, ಪ್ರನಾಳ, ಮೋಂಬತ್ತಿ ಮುಂತಾದ ವಸ್ತುಗಳು ಈಗಾಗಲೇ ಅವರ ಗೇಲಿಯ ವಸ್ತುಗಳಾಗಿವೆ. ಶಸ್ತ್ರಚಿಕಿತ್ಸೆಗೆ ಸಂಬಂಧಿಸಿದ ಪಾಠದ ಬೋಧನೆಗೂ ಇವುಗಳಿಗೂ ಎತ್ತಣ ಸಂಬಂಧ ? ಇದೇನು ರಾಸಾಯನ ಶಾಸ್ತ್ರದ ಪಾಠವೋ ಅಥವಾ ನಾಟಕ ಪ್ರದರ್ಶನವೋ ಎಂದು ಕುಹಕದ ಚರ್ಚೆ ಮುಂದುವರಿಯುತ್ತಿತ್ತು ಅವರೊಳಗೆ.

ನೀಳಕಾಯದ ಸ್ಫುರದ್ರೂಪಿ, ಆಕರ್ಷಕ ವ್ಯಕ್ತಿ ತನ್ನ ಕೆಲವು ಸಹಾಯಕರೊಡನೆ ಹಠಾತ್ತಾಗಿ ಪ್ರವೇಶಿಸುತ್ತಾರೆ. ಅವರು ಪ್ರವೇಶಿಸುತ್ತಿದ್ದಂತೆಯೇ ಎಂದಿನ ಅಭ್ಯಾಸದಂತೆ ವಿದ್ಯಾರ್ಥಿಗಳು ಎದ್ದು ನಿಂತರೂ, 'ಕಿಟಕಿ ಬಾಗಿಲುಗಳನ್ನು ಮುಚ್ಚಿರಿ, ಅವರ ಜೊತೆ ಮಿಣಿ ಜೀವಿಗಳು ಒಳಗೆ ಬಂದಾವು !' ಎಂಬ ಕುಹಕದ ಮಾತುಗಳಿಂದ ಹಾಸ್ಯ ಚಟಾಕಿ ಹಾರಿಸಿ ಕುಳಿತುಕೊಳ್ಳುತ್ತಾರೆ. ಈ ಮಾತುಗಳು ಕೇಳಿಸಿದರೂ ಕೇಳಿಸಿಕೊಳ್ಳದವರಂತೆ ಪ್ರೊಫೆಸರ್ ವೇದಿಕೆ ಏರಿ ಕುಳಿತು ಕೊಳ್ಳುತ್ತಾರೆ. ವಿದ್ಯಾರ್ಥಿಗಳ ಬಗೆಗೆ ಕೆಲವು ಒಳ್ಳೆಯ ಮಾತುಗಳನ್ನಾಡಿ ಅವರನ್ನು ತಮ್ಮತ್ತ ಒಲಿಸಿಕೊಂಡು, ಅಂದಿನ ವಿಷಯಕ್ಕೆ ಬರುತ್ತಾರೆ. ತಮಗೆ ಪ್ರಿಯವಾದ ಆದರೂ ಇಂಗ್ಲೆಂಡಿನಾದ್ಯಂತ ಹೆಚ್ಚಿನ ವಿವಾದಕ್ಕೊಳಗಾದ ವಿಷಯವನ್ನು ಪ್ರಯೋಗಗಳ ಮೂಲಕ ವಿಶದಗೊಳಿಸುವುದಾಗಿ ತಿಳಿಸುತ್ತಾರೆ. ಆ ವಿಷಯ - 'ಆಂಟಿಸೆಪ್ಟಿಕ್ ತತ್ವ (ANTISEPTIC PRINCIPLES) ಗಳನ್ನು ಸ್ವತಃ ಅವರೇ ಮೊಟ್ಟಮೊದಲು ಪ್ರತಿಪಾದಿಸಿ, ಕೆಲವು ಆಸ್ಪತ್ರೆಗಳಲ್ಲಿ ಜಾರಿಗೆ ತಂದು ಒಳ್ಳೆಯ ಪರಿಣಾಮಗಳನ್ನು ಪಡೆದಿರುವುದನ್ನು ವಿದ್ಯಾರ್ಥಿಗಳ ಗಮನಕ್ಕೆ ತರುತ್ತಾರೆ. ಲಂಡನ್ನಿನ ಮೆಡಿಕಲ್ ವಿದ್ಯಾರ್ಥಿಗಳಿಗೆ ವಿಷಯ ತೀರಾ ಹೊಸದಾದುದರಿಂದ,

ಮೇಜಿನ ಮೇಲೆ ಜೋಡಿಸಿಟ್ಟಿರುವ ಸಲಕರಣೆಗಳಿಂದ ಅವರಿಗೆ ಆಂಟಿಸೆಪ್ಟಿಕ್ ತತ್ವದ ಹಿಂದಿರುವ ವೈಜ್ಞಾನಿಕ ಆಧಾರಗಳನ್ನು ವಿವರಿಸುತ್ತಾರೆ. ಅವರೊಡನೆ ಬಂದಿದ್ದ ಸಹಾಯಕರು ಫ್ರಾನ್ಸಿನ ಲೂಯಿ ಪ್ಯಾಶ್ಚರ್, ಮದ್ಯಸಾರದ ತಯಾರಿಕೆಗಾಗಿ ಇರಿಸಿದ್ದ ದ್ರಾಕ್ಷಾರಸ ಕೊಳೆತು ಹಾಳಾಗುವುದು ಮತ್ತು ಅಂತಹ ರಸವನ್ನು ವಾತಾವರಣಕ್ಕೆ ತೆರೆದಿಟ್ಟರೆ, ಅದರಲ್ಲಿ ಮದ್ಯಸಾರ ಉತ್ಪಾದನೆಯಾಗುವುದು, ಇಲ್ಲವೆ ಹಾಗೆ ಕಾಯಿಸಿದ ದ್ರವವನ್ನು ಕೂಡಲೇ ಬಿರಡೆಯಿಂದ ಮುಚ್ಚಿಟ್ಟರೆ ಅದರಲ್ಲಿ ಮದ್ಯಸಾರ ಉತ್ಪಾದನೆಯಾಗದಿರುವುದನ್ನು ಉಪಕರಣಗಳ ಸಹಾಯದಿಂದ ವಿವರಿಸುತ್ತಾರೆ. ಕೆಲವರಿಗೆ ಅದರ ಮರ್ಮ ಸ್ವಲ್ಪಮಟ್ಟಿಗೆ ಅರ್ಥವಾದಂತೆ ಕಂಡರೆ, ಮತ್ತೆ ಕೆಲವರಿಗೆ ಇಂತಹ ರಾಸಾಯನಿಕ ಪ್ರಯೋಗಕ್ಕೂ ಶಸ್ತ್ರಚಿಕಿತ್ಸಾ ಕ್ರಮಗಳಿಗೂ ಇರುವ ಸಂಬಂಧಗಳೇನೆಂಬುದು ಆಚ್ಚರಿಯನ್ನುಂಟು ಮಾಡಿದ್ದರಲ್ಲಿ ಅಶ್ಚರ್ಯವೇನಿಲ್ಲ. ಆಂಟಿಸೆಪ್ಟಿಕ್ ನಿಯಮಗಳ ಪ್ರತಿಪಾದನೆಯಾದಾಗಿನಿಂದಲೂ ಅದನ್ನು ಯಾವ ಯಾವುದೋ ಕಾರಣಗಳಿಂದ ವಿರೋಧಿಸಿ ಅಪಪ್ರಚಾರ ನಡೆಸಿದ್ದರ ಪರಿಣಾಮವೇ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಗೊಂದಲಗಳಾಗುತ್ತಿದ್ದುದರ ಕಾರಣವಾಗಿತ್ತು. ಲಂಡನ್‌ನಲ್ಲಿ ಅಂತಹ ವಿರೋಧದ ವಾತಾವರಣ ಪರಾಕಾಷ್ಠೆಯಲ್ಲಿದ್ದ ಸಮಯ ಅದು.

ಘಟನೆ ನಡೆದದ್ದು 1877 ರ ಅಕ್ಟೋಬರ್ ಮೊದಲನೆ ದಿನವೆ. ಅಂದು ಭಾಷಣ ಮಾಡಿದವರು ಮತ್ತಾರೂ ಅಲ್ಲದೆ ಈಗ ವ್ಯಾಪಕವಾಗಿ ಆಚರಣೆಯಿಲ್ಲರುವ ಆಂಟಿಸೆಪ್ಟಿಕ್ (ಪೂತಿ ನಾಶಕ) ನಿಯಮಗಳ ಪ್ರತಿಪಾದಕ ಪ್ರೊ : ಜೋಸೆಫ್ ಲಿಸ್ಟರ್. ಆಂಟಿಸೆಪ್ಟಿಕ್, ಎಸೆಪ್ಟಿಕ್, ಲಿಸ್ಟರಿಸಂನಂತಹ ಶಬ್ದಗಳು ಈಗ ಮನೆಮಾತಾಗಿರುವುದಾದರೂ, ಜೋಸೆಫ್ ಲಿಸ್ಟರ್ ಆ ಸಮಯದಲ್ಲಿ ಅಷ್ಟೇನೂ ಹೆಸರುವಾಸಿಯಾದವರಾಗಿರಲಿಲ್ಲ. ಆಂಟಿಸೆಪ್ಟಿಕ್ ತತ್ವ ಈಗ ಜನಪ್ರಿಯವಾಗಿ ಆಚರಣೆಯಲ್ಲಿರುವುದಾದರೂ ವೈದ್ಯಕೀಯ ರಂಗದಲ್ಲಿ ಅದನ್ನು ಆಗ ಅಲ್ಲಗಳೆಯುವವರೇ ಹೆಚ್ಚಾಗಿದ್ದರು. ವೈದ್ಯರು ಮತ್ತು ವೈದ್ಯ ವಿಷಯಗಳನ್ನು ಬೋಧಿಸುವ ಆಚಾರ್ಯರೆನಿಸಿಕೊಂಡವರೂ ಕೂಡ, ಅದರ ಬಗೆಗೆ ತುಂಬಾ ನಿರ್ಲಕ್ಷ್ಯ ಭಾವನೆ ತಾಳಿದ್ದರು; ವಿದ್ಯಾರ್ಥಿಗಳಿಗೆ ಪಾಠ ಹೇಳುವಾಗಲೂ ಅದನ್ನು ಖಂಡಿಸುತ್ತಿದ್ದರು. ಅಂತಹ ಸನ್ನಿವೇಶದಲ್ಲಿ ವಿದ್ಯಾರ್ಥಿಗಳೂ ಸಹ ಅದನ್ನು ತುಂಬಾ ಹಗುರವಾಗಿ ಕಾಣುತ್ತಿದ್ದುದರಲ್ಲಿ ಆಶ್ಚರ್ಯವೇನಿಲ್ಲ.

ಜೋಸೆಫ್ ಲಿಸ್ಟರ್, ತುಂಬಾ ಕಿರಿಯ ವಯಸ್ಸಿನಲ್ಲೇ ವೈದ್ಯರಾಗಿದ್ದಲ್ಲದೇ, ಕೇವಲ 33 ನೇ ವರ್ಷದಲ್ಲೇ ಶಸ್ತ್ರಚಿಕಿತ್ಸಾ ವಿಭಾಗದ ಪ್ರೊಫೆಸರ್ ಹುದ್ದೆಗೇರಿ, ಪ್ರತಿಭಾವಂತರೆನಿಸಿಕೊಂಡವರು. ಗಾಯಗಳಲ್ಲಿ ನಂಜಾಗುವುದರಿಂದ (SEPSIS) ಉಂಟಾಗುತ್ತಿದ್ದ ಅನಾಹುತಗಳ ಬಗ್ಗೆ ಆಳವಾಗಿ ಚಿಂತಿಸಿ, ಪ್ರಯೋಗಗಳನ್ನು ಜರುಗಿಸಿ, ಕೀವಾಗುವುದನ್ನು ತಡೆಗಟ್ಟಲು ಆಂಟಿಸೆಪ್ಟಿಕ್ ನಿಯಮಗಳು ಸಹಾಯಕಾರಿಯಾಗುತ್ತದೆಂದು ತೋರಿಸಿಕೊಟ್ಟವರು. ಆದರೂ ಆ ಕಾಲದ ವೈದ್ಯಲೋಕದ ಪ್ರಮುಖರು ಲಿಸ್ಟರ್ ಮತ್ತು ಅವರ ತತ್ವಗಳನ್ನು ಕಟುವಾಗಿ ವಿರೋಧಿಸಿದರು. ಅವುಗಳನ್ನು ಕಟ್ಟುನಿಟ್ಟಾಗಿ ಆಚರಿಸದೇ ನಿಷ್ಪ್ರಯೋಜಕವೆಂದು ಹೀಗಳೆದರು. ಸಮ್ಮೇಳನಗಳಲ್ಲಿ ಖಂಡಿಸಿ ಮಾತಾಡಿದರು. ಆದರೆ ಯುರೂಪ್ ಮತ್ತು ಅಮೇರಿಕಾದ ಕೆಲವು ಶಸ್ತ್ರ ವೈದ್ಯರು ಲಿಸ್ಟರನ ತತ್ವಗಳನು ಚಾಚೂ ತಪ್ಪದೆ ಅನುಸರಿಸಿ ಶಸ್ತ್ರ ಚಿಕಿತ್ಸೆಗಳನ್ನು ಕೈಗೊಂಡರು. ಅವರ ಸಾಧನೆಗಳು ಇತರರನ್ನು ಪ್ರಚೋದಿಸಿದವು. ಶಸ್ತ್ರ ಚಿಕಿತ್ಸೆಗಳ ನಂತರವೇ ಅಲ್ಲದೆ ಇತರ ಗಾಯಗಳಲ್ಲಿ ನಂಜಾಗಿ ಕೀವಿನ ದುಷ್ಪರಿಣಾಮಗಳಿಂದ ಆಗುತ್ತಿದ್ದ ಅನಾಹುತಗಳು ತೀರಾ ಕಡಿಮೆಯಾದವು. ಅನಾದಿಯಿಂದಲೂ ಹೆಚ್ಚಿನ ಪ್ರಗತಿ ಕಾಣದಿದ್ದ ಶಸ್ತ್ರಚಿಕಿತ್ಸಾ ವಿಧಾನವೂ ಗರಿಗೆದರಿ ಹಾರುವಂತಾಯಿತು. ಜೋಸೆಫ್ ಲಿಸ್ಟರ್ ಒಡನೆಯೇ ಮನೆ ಮಾತಾದರು. ಅವರ ಕೀರ್ತಿ ಪತಾಕೆ ಗಗನಕ್ಕೇರಿತು. ಇಂಗ್ಲೆಂಡ್‌ನ ಅತ್ಯುನ್ನತ ಗೌರವವೆನ್ನುವ 'ಲಾರ್ಡ್' ಪದವಿ ದೊರೆತು ಅವರ ಹೆಸರು ಅಜರಾಮರವಾಗಿದೆ. ಪ್ರಪಂಚದಾದ್ಯಂತ ಪ್ರತಿದಿನ ಜರುಗುವ ಶಸ್ತ್ರ ಚಿಕಿತ್ಸೆಗಳು ಅವರ ಸ್ಮಾರಕದ ಕುರುಹುಗಳಾಗಿವೆ ಎಂದರೆ ಅತಿಶಯೋಕ್ತಿಯಲ್ಲ. ಆದರೆ ಈಗ ಬಹಳ ಸರಳವೆನ್ನಬಹುದಾದ ಆಂಟಿಸೆಪ್ಟಿಕ್ ನಿಯಮವನ್ನು ಸಾಧಿಸುವಲ್ಲಿ ಅಂದು ಅತಿ ಹೆಚ್ಚು ಶ್ರಮಪಡುವಂತಾಯಿತು. ಪ್ರಪಂಚದ ಬಹುಪಾಲು ಜನ ಈಗ ಬದುಕುಳಿಯುವುದು ಅವರೆಲ್ಲಾ ತಮಗರಿವಿಲ್ಲದೆ ವ್ಯಾಪಕವಾಗಿ ಅನುಸರಿಸುತ್ತಿರುವ ಲಿಸ್ಟರನ ನಿಯಮಗಳ ಆಚರಣೆಯಿಂದಲೇ ಎಂದರೆ ನಂಬುವುದಸಾಧ್ಯ.

# ೨. ಬಾಲ್ಯ ವಿದ್ಯಾಭ್ಯಾಸ

ಇಂಗ್ಲೆಂಡಿನಲ್ಲಿ ಶಾಂತಿ ಪ್ರಿಯರೂ ವಿಶ್ವ ಭ್ರಾತೃತ್ವ ಹಾಗೂ ಎಲ್ಲರೊಂದಿಗೂ ಸೌಹಾರ್ದದಿಂದ ಬಾಳುವ ಆದರ್ಶವನ್ನು ಪಾಲಿಸುವ ಕ್ವೇಕರ್ ಪಂಗಡವೆನ್ನುವ ಜನ ಸಮುದಾಯವೊಂದಿದೆ. ಅವರು ಕ್ರಿಶ್ಚಿಯನ್ ಧರ್ಮದವರಾದರೂ ಅದರ ಎಲ್ಲಾ ಸಾಂಪ್ರದಾಯಿಕ ಆಚರಣೆಗಳಲ್ಲಿ ಭಾಗವಹಿಸುವುದಿಲ್ಲ. ಮತ ಗುರುಗಳು ಮತ್ತು ಚರ್ಚುಗಳ ಕಟ್ಟುನಿಟ್ಟಿಗೊಳಗಾಗದೆ ಸಾಮೂಹಿಕ ಪ್ರಾರ್ಥನೆ ಮಾಡುತ್ತಾರೆ. ಸೌಮ್ಯ ಹಾಗೂ ನೀತಿಯುತವಾದ ನಡವಳಿಕೆಗಳಿಂದಲೇ ತಮ್ಮ ಮತದ ತತ್ವಗಳನ್ನು ಪಾಲಿಸುವುದು ಅವರ ಮಾರ್ಗ. ಯುದ್ಧ, ಗಲಭೆ, ಹೋರಾಟಗಳಂತಹ ಹಿಂಸಾತ್ಮಕ ಚಟುವಟಿಕೆಗಳಿಂದ ದೂರವಿರುತ್ತಾರೆ. ಅಂತಹ ಚಟುವಟಿಕೆಗಳಲ್ಲಿ ಭಾಗವಹಿಸಬೇಕಾದ ಪೋಲಿಸ್, ಮಿಲಿಟರಿ ಉದ್ಯೋಗಗಳಿಗೆ ಅವರು ಸೇರುವವರಲ್ಲ. ಆದರೆ ಅಂತಹ ಸಂಘರ್ಷಗಳಲ್ಲಿ ಗಾಯಗೊಂಡು ನೊಂದವರನ್ನು ಉಪಚರಿಸುವ ಕಾರ್ಯಕ್ರಮಗಳಲ್ಲಿ ಆಸಕ್ತಿ ವಹಿಸಿ ಮಾನವೀಯ ನೆರವು ನೀಡಲು ಮುಂದಾಗುತ್ತಾರೆ. ತಿರುಳಿಲ್ಲದ ಆಟೋಟಗಳು, ನೃತ್ಯ, ಸಿನಿಮಾ, ನಾಟಕಗಳಂತಹ ಕೇವಲ ಮನರಂಜನೆಯ ಕಾರ್ಯಕ್ರಮಗಳೂ ಅವರಿಗೆ ಹಿಡಿಸುವುದಿಲ್ಲ. ಅವರ ಬಹುಪಾಲು ಜನ ನ್ಯಾಯಸಮ್ಮತವಾದ ವ್ಯಾಪಾರದಂತಹ ಉದ್ಯೋಗಗಳನ್ನ ವಲಂಬಿಸುವುದೇ ಹೆಚ್ಚು. ದುಬಾರಿಯ ಹವ್ಯಾಸಗಳಲ್ಲಿ ತೊಡಗಿಸಿಕೊಳ್ಳದ ಅವರು ಸದಾ ಮಿತವ್ಯಯದ ಜೀವನ ನಡೆಸಿ ಐಶ್ವರ್ಯವಂತರಾಗುತ್ತಿದ್ದುದು ಸಹಜವೇ ಆಗಿದ್ದಿತು. ಹಾಗೆ ಗಳಿಸಿದ ಐಶ್ವರ್ಯದ ಸ್ವಲ್ಪ ಭಾಗವನ್ನು ಜನಸಮುದಾಯದವರ ವಿದ್ಯಾಭ್ಯಾಸ ಮತ್ತು ವೈಜ್ಞಾನಿಕ ವಿಷಯಗಳ ಪ್ರಗತಿಗಾಗಿ ವಿನಿಯೋಗಿಸುವ ಪದ್ಧತಿ ಅವರದು. ಇಂತಹ ಸೌಮ್ಯ ಸ್ವಭಾವದ ಹಿನ್ನೆಲೆಯ ಕ್ವೇಕರ್ ಮನೆತನ ಈ ಜೀವ ಚರಿತ್ರೆಯ ಕಥಾನಾಯಕ ಲಾರ್ಡ್ ಜೋಸೆಫ್ ಲಿಸ್ಟರ್‌ದು.

ಜೋಸೆಫ್ ಲಿಸ್ಟರ್‌ನ ಕುಟುಂಬದವರು ಮೂಲತಃ ಯಾರ್ಕ್‌ಷೈರ್ ಪ್ರಾಂತಕ್ಕೆ ಸೇರಿದವರು. ಕಾರಣಾಂತರಗಳಿಂದ ಅವರು 1700ರ ಸಮಯಕ್ಕೆ ಲಂಡನ್ ನಗರದಲ್ಲಿ ಬಂದು ನೆಲೆಸಿದರು. ಅವರ ಅಜ್ಜ ಜೋಸೆಫ್ ಜಾನ್ ಲಿಸ್ಟರ್ ಮೊದಲಿಗೆ ಗಡಿಯಾರಗಳ ದುರಸ್ಥಿ ಮತ್ತು ಮಾರಾಟದ ವ್ಯಾಪಾರವನ್ನವಲಂಬಿಸಿದ್ದ. ಆದರೆ ಅವನ ಮಾವ ಗತಿಸಿದ ನಂತರ ಒಳ್ಳೆಯ

ಸ್ಥಿತಿಯಲ್ಲಿದ್ದ ಅವನ ಮದ್ಯಸಾರ ಮಾರಾಟದ ಉದ್ಯಮವನ್ನು ತನ್ನದಾಗಿಸಿಕೊಂಡು, ಒಳ್ಳೆಯ ಸಂಪಾದನೆಯ ದಾರಿ ಹಿಡಿದಿದ್ದ. ಅವನ ಒಬ್ಬನೇ ಮಗ ಜೋಸೆಫ್ ಜಾಕ್ಸನ್ ಲಿಸ್ಟರ್ ಕೂಡ ಮದ್ಯ ಪಾನೀಯಗಳ ವ್ಯಾಪಾರವನ್ನೇ ಮುಂದುವರಿಸಿ, ಶ್ರೀಮಂತನೂ ಆಗಿದ್ದನು. ಯಾರ್ಕ್‌ಷೈರ್‌ನ ಆಕ್‌ವರ್ಥ್ ಎಂಬಲ್ಲಿದ್ದ ಕ್ವೇಕರ್ ಸಮಾಜದವರ ಶಾಲೆಯೊಂದರ ಮೇಲ್ವಿಚಾರಕಳಾಗಿದ್ದ ಅಧಿಕಾರಿಣಿಯ ಮಗಳು ಇಸಬೆಲ್ಲ ಹ್ಯಾರಿಸ್‌ಳನ್ನು ಮದುವೆಯಾಗಿ ಸುಖದ ಜೀವನ ನಡೆಸುತ್ತಿದ್ದ. ಇಸಬೆಲ್ಲ ಕೂಡ ಶಿಕ್ಷಕಿಯಾಗಿ ಒಳ್ಳೆಯ ಹೆಸರು ಗಳಿಸಿದ್ದಳು. ಮಧ್ಯ ವಯಸ್ಸಿಗೆ ಬರುವಷ್ಟರಲ್ಲಿ ಜಾಕ್ಸನ್ ಲಿಸ್ಟರ್ ತನ್ನ ಗಳಿಕೆಯಿಂದ ಅಪ್ಟಾನ್ ಎಂಬಲ್ಲಿದ್ದ ರಾಣಿ ಆ್ಯನಳ ಅರಮನೆಯನ್ನು ಕೊಂಡು ಅವರೆಲ್ಲ ಅದರಲ್ಲಿ ವಾಸ ಮಾಡುತ್ತಿದ್ದರು. ಎಳೆತನದಲ್ಲಿ ಒಳ್ಳೆಯ ವಿದ್ಯೆಯನ್ನು ಕಲಿತ ಜಾಕ್ಸನ್‌ಗೆ ವೈಜ್ಞಾನಿಕ ವಿಷಯಗಳಲ್ಲಿ ಹೆಚ್ಚಿನ ಆಸಕ್ತಿ ಇತ್ತು. ಕನ್ನಡಕಗಳ ಗಾಜಿನ ಬಿಲ್ಲೆಗಳ ತಯಾರಿಕೆಯಲ್ಲಿ ಹಲವು ಮಾರ್ಪಾಡುಗಳನ್ನು ಮಾಡಿ ಹೆಸರುಗಳಿಸಿದ್ದ. ಬಾಲಕನಾಗಿದ್ದಾಗ ಅವನಿಗೆ ದೃಷ್ಟಿದೋಷವಿತ್ತು. ಕಿಟಕಿಯ ಬಾಗಿಲುಗಳಿಗೆ ಅಳವಡಿಸಿದ್ದ ಗಾಜಿನಲ್ಲಿದ್ದ ಉಬ್ಬುಗಳ ಮೂಲಕ ದೃಷ್ಟಿ ಹಾಯಿಸಿದಾಗ ತನ್ನ ದೃಷ್ಟಿ ಉತ್ತಮವಾಗುವುದನ್ನು ಗಮನಿಸಿ ಅದನ್ನು ಸರಿಪಡಿಸಿಕೊಳ್ಳಲು ಕನ್ನಡಕವನ್ನು ಅವನೇ ತಯಾರಿಸಿಕೊಂಡಿದ್ದನಂತೆ. ಮುಂದೆ ಗಾಜಿನ ಬಿಲ್ಲೆಗಳ ಅಳವಡಿಕೆಯಿಂದ ಸೂಕ್ಷ್ಮದರ್ಶಕಯಂತ್ರವನ್ನು ತಯಾರಿಸಿ ವೈಜ್ಞಾನಿಕ ಕ್ಷೇತ್ರದಲ್ಲೂ ಹೆಸರು ಗಳಿಸಿದ್ದ. ವೈಜ್ಞಾನಿಕ ಸಾಧನೆಗಳನ್ನು ಗುರುತಿಸಿ 1832ರಲ್ಲಿ ರಾಯಲ್ ಸೊಸೈಟಿಯವರು ಫೆಲೋಷಿಪ್ಪನ್ನು ನೀಡಿ ಗೌರವಿಸಿದ್ದರು. (ಅವನ ಮಗ ಜೋಸೆಫ್ ಲಿಸ್ಟರ್ ಕೂಡ ಮುಂದೆ ರಾಯಲ್ ಸೊಸೈಟಿಯ ಫೆಲೋಷಿಪ್ ಗಳಿಸಿದ) ಜೊತೆಗೆ ಸಾಹಿತ್ಯ ಮತ್ತು ಚಿತ್ರಕಲೆಯಲ್ಲೂ ಒಳ್ಳೆಯ ಅಭಿರುಚಿ ಇತ್ತು.

ಜಾಕ್ಸನ್ ಲಿಸ್ಟರ್ ಮತ್ತು ಇಸಾಬೆಲ್ಲರ ನಾಲ್ಕನೆಯ ಮಗನಾಗಿ ಜೋಸೆಫ್ ಲಿಸ್ಟರ್ 1827ರ ಏಪ್ರಿಲ್ 5 ರಂದು ಜನಿಸಿದ. ಸುಸಂಸ್ಕೃತ ಮತ್ತು ಶ್ರೀಮಂತಿಕೆಯ ಕುಟುಂಬದಲ್ಲಿ ಜನಿಸಿದ ಬಾಲಕ ಜೋಸೆಫ್‌ನ ಜೀವನ ಸುಖದ ಸೋಪಾನವೇ ಆಗಿತ್ತು. ಕಷ್ಟಕಾರ್ಪಣ್ಯಗಳೇನೆಂಬುದರ ಪರಿಚಯವೇ ಆಗದೆ ಲಿಸ್ಟರ ಮನೆತನದ ಮಕ್ಕಳು ತಮ್ಮ ಬಾಲ್ಯವನ್ನು ಕಳೆಯುತ್ತಿದ್ದರು.

ಹತ್ತಿರದ ಟೋಟನ್‌ಹ್ಯಾಮ್‌ನಲ್ಲಿದ್ದ ಕ್ವೇಕರ್ ಸಮಾಜದವರ ಶಾಲೆಯಲ್ಲಿ ಜೋಸೆಫ್‌ನ ಆರಂಭದ ವಿದ್ಯಾಭ್ಯಾಸ ಜರುಗಿತು. ಗಣಿತದ ವಿಷಯಗಳಲ್ಲಿ

ಒಳ್ಳೆಯ ತರಬೇತಿ ಅಲ್ಲಿ ದೊರೆಯುತ್ತಿತ್ತು. ಜೊತೆಗೆ ಪ್ರಬಂಧಗಳ ರಚನೆಯ ಅಭ್ಯಾಸದಲ್ಲೂ ಆ ಶಾಲೆಯಲ್ಲಿ ಹೆಚ್ಚಿನ ಆಸಕ್ತಿ ವಹಿಸುತ್ತಿದ್ದರು. ವ್ಯಕ್ತಿತ್ವದಲ್ಲಿ ಸ್ವಂತಿಕೆ ಮತ್ತು ಅಭಿವ್ಯಕ್ತಿ ಸಾಮರ್ಥ್ಯವನ್ನು ಗಳಿಸುವುದರಲ್ಲಿ ಪ್ರಬಂಧಗಳ ರಚನೆ ಪ್ರಮುಖ ಪಾತ್ರ ವಹಿಸುತ್ತವೆಂಬುದನ್ನು ಅರಿತಿದ್ದ ಶಾಲೆಯ ಬೋಧಕರು ವಿದ್ಯಾರ್ಥಿಗಳಿಗೆ ಆ ಬಗೆಗೆ ಹೆಚ್ಚಿನ ತರಬೇತಿ ನೀಡುತ್ತಿದ್ದರು. ಜೋಸೆಫ್ ಆ ಕಾಲದಲ್ಲಿ ರಚಿಸಿದ ಪ್ರಬಂಧಗಳು ಎಳೆಯ ವಯಸ್ಸಿನಲ್ಲೇ ಅವನ ಪ್ರೌಢ ಮನಸ್ಸಿನ ಸಂಕೇತದಂತಿರುತ್ತಿದ್ದವು ಎನ್ನಲಾಗಿದೆ. ಹಲವು ಪ್ರಾಣಿ ಪಕ್ಷಿಗಳ ಬಾಹ್ಯ ರಚನೆಗಳ ಬಗೆಗೆ ಪ್ರಬಂಧ ರಚಿಸುವ ಹವ್ಯಾಸ ಅವನಿಗೆ ಕರಗತವಾದಂತಿತ್ತು. ಕೆಲವು ಪ್ರಾಣಿಗಳ ಅಸ್ಥಿಪಂಜರಗಳನ್ನು ಅಭ್ಯಸಿಸಿ, ಅವುಗಳನ್ನು ವಿವಿಧ ವರ್ಗದ ಪ್ರಾಣಿಗಳೊಡನೆ ಹೋಲಿಕೆ ಮಾಡಿ ಪ್ರಬಂಧ ರಚಿಸಿದ್ದನು. ಮನುಷ್ಯ ಮತ್ತು ಮಂಗಗಳ ಅಸ್ಥಿಪಂಜರದಲ್ಲಿರುವ ಸಾಮ್ಯತೆ ಅವನಲ್ಲಿ ಆಗಲೇ ಅಚ್ಚರಿ ಉಂಟು ಮಾಡಿತ್ತು. ಅವುಗಳ ಹೋಲಿಕೆಯನ್ನು ಸಚಿತ್ರವಾಗಿ ವಿವರಿಸಿ ಪ್ರಬಂಧ ರಚಿಸಿದ್ದ ಕೂಡ! ಪ್ರಾಣಿ ಮತ್ತು ಮಾನವನ ಅಂಗರಚನಾಶಾಸ್ತ್ರ (ANATOMY) ಗಳು ಅವನ ತೀವ್ರ ಗಮನ ಸೆಳೆಯುವ ವಿಷಯವಾಗಿದ್ದು, ಮುಂದೆ ವೈದ್ಯಕೀಯ ವಿಷಯಗಳನ್ನು ಅಭ್ಯಾಸ ಮಾಡಿ ಶಸ್ತ್ರವೈದ್ಯನಾಗಬೇಕೆಂಬ ಅಭಿಲಾಷೆ ಅವನಿಗಿತ್ತೆಂದು ಊಹಿಸಬಹುದಿತ್ತು. ಹವ್ಯಾಸಿ ವಿಜ್ಞಾನಿ ಯಾಗಿದ್ದ ಅವನ ತಂದೆ ಮಗನ ಅಭಿಲಾಷೆಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು. ಸ್ವತಃ ಶಿಕ್ಷಕಿಯಾಗಿದ್ದ ತಾಯಿ ಜೋಸೆಫ್‌ನಲ್ಲಿ ಒಳ್ಳೆಯ ನಡತೆ ಮತ್ತು ಶಿಸ್ತುಗಳನ್ನು ರೂಢಿಸಿಕೊಳ್ಳುವುದರಲ್ಲಿ ತನ್ನ ಪಾತ್ರ ವಹಿಸುತ್ತಿದ್ದಳು.

ಜೋಸೆಫ್ ಲಿಸ್ಟರ್ ತನ್ನ ಹದಿನಾರನೆಯ ವಯಸ್ಸಿಗೆ (1844) ಶಾಲಾ ವಿದ್ಯಾಭ್ಯಾಸವನ್ನು ಮುಗಿಸಿ ಪದವಿ ಶಿಕ್ಷಣಕ್ಕಾಗಿ ಕಾಲೇಜು ಸೇರುವಲ್ಲಿ ಅಡಚಣೆಯೊಂದನ್ನು ಎದುರಿಸಬೇಕಾಯಿತು. ಬಹುಪಾಲು ಕಾಲೇಜುಗಳು ಆಕ್ಸ್‌ಫರ್ಡ್ ಇಲ್ಲವೇ ಕೇಂಬ್ರಿಡ್ಜ್ ಚರ್ಚ್‌ಗೆ ನಿಷ್ಠೆ ಹೊಂದಿದ್ದವಾಗಿದ್ದವು. ಚರ್ಚುಗಳ ವಿಧಿವಿಧಾನಗಳನ್ನು ಕಟ್ಟುನಿಟ್ಟಾಗಿ ಪಾಲಿಸುವವರಿಗೆ ಮಾತ್ರ ಅವುಗಳಲ್ಲಿ ವಿದ್ಯಾಭ್ಯಾಸ ಮಾಡಲು ಅವಕಾಶವಿರುತ್ತಿತ್ತು. ಕ್ವೇಕರ್ ಸಮುದಾಯಕ್ಕೆ ಸೇರಿದ ಲಿಸ್ಟರ್ ಕುಟುಂಬದವರಿಗೆ ಅವುಗಳಿಗೆ ಪ್ರವೇಶ ದೊರೆಯುತ್ತಿರಲಿಲ್ಲ. ಅದೃಷ್ಟವಶಾತ್ ಕೆಲವು ವರ್ಷಗಳ ಹಿಂದೆ 'ಯುನಿವರ್ಸಿಟಿ ಕಾಲೇಜ್' ಎಂಬ ಕಾಲೇಜೊಂದು ಆರಂಭವಾಗಿದ್ದು ಅದರಲ್ಲಿ ಎಲ್ಲರಿಗೂ ಮುಕ್ತ

ಅವಕಾಶವಿರುತ್ತಿತ್ತು. 'ನಾಸ್ತಿಕರ ಕಾಲೇಜ್' ಎಂದೇ ಹೆಸರಾಗಿದ್ದ ಅದರಲ್ಲಿ ಲಿಸ್ಟರ್‌ಗೆ ಪ್ರವೇಶ ದೊರೆಯಿತು. ಅದರಲ್ಲಿ ಎರಡು ವರ್ಷಗಳ ಕಾಲ ಅಭ್ಯಾಸ ಮಾಡಿ ಬಿ.ಎ. ಪದವಿ ಗಳಿಸಿಕೊಂಡ. ಅಷ್ಟೇನೂ ಪ್ರತಿಭಾವಂತ ವಿದ್ಯಾರ್ಥಿ ಎನಿಸಿಕೊಳ್ಳದಿದ್ದರೂ ನಿರಾಯಾಸವಾಗಿ ಪದವಿ ಗಳಿಸಿಕೊಂಡಿದ್ದ. ಈ ಸಮಯದಲ್ಲಿ ಲಿಸ್ಟರ್ ಮೈಲಿ ಬೇನೆಯಿಂದ ನರಳಿ, ನಂತರ ಸ್ವಲ್ಪ ಕಾಲ ಮಾನಸಿಕವಾಗಿಯೂ ಬಳಲುವಂತಾಯಿತು.

## ೨.೧ ವೈದ್ಯಕೀಯ ವಿದ್ಯಾಭ್ಯಾಸ

ತನಗಿಷ್ಟವಾದ ವೈದ್ಯಕೀಯವನ್ನು ಅಭ್ಯಸಿಸಲು ಲಂಡನ್ ವಿಶ್ವವಿದ್ಯಾಲಯದ ಮೆಡಿಕಲ್ ಸ್ಕೂಲಿಗೆ ಪ್ರವೇಶ ಪಡೆಯಲು ಲಿಸ್ಟರ್‌ಗೆ ಅಡಚಣೆಗಳಾವುವೂ ಇರಲಿಲ್ಲ. ಹಿಂದಿನ ವರ್ಷಗಳಲ್ಲಿದ್ದ ಜಡ ಸ್ವಭಾವ ಈಗ ಮಾಯವಾಗಿಬಿಟ್ಟಿತು. ವೈದ್ಯಕೀಯದ ಎಲ್ಲಾ ವಿಷಯಗಳನ್ನು ತುಂಬಾ ಆಸಕ್ತಿವಹಿಸಿ ಅಧ್ಯಯನ ಮಾಡಿದ. ಹಲವು ಶಿಕ್ಷಕರು ಬಹುಶಃ ಲಿಸ್ಟರನ ಪ್ರತಿಭೆಯನ್ನು ಗುರುತಿಸಿ ವೃತ್ತಿಯನ್ನು ಕಲಿಯುವಲ್ಲಿ ಮಾರ್ಗದರ್ಶನ ಮಾಡುತ್ತಿದ್ದುದು ಅವನ ಸುಯೋಗವೆಂತಲೇ ಹೇಳಬೇಕು. ಅವರಲ್ಲೆಲ್ಲಾ ವಿಲಿಯಂ ಶಾರ್ಪೆಯೆಂಬುವರು ಪಾತ್ರ ಉಲ್ಲೇಖಾರ್ಹ. ಶರೀರಕ್ರಿಯಾ ಶಾಸ್ತ್ರ (PHYSIOLOGY) ಬೋಧಕರಾದ ಶಾರ್ಪೆ ಯುರೋಪಿನ ಹಲವು ಕೇಂದ್ರಗಳಲ್ಲಿ ಉಪನ್ಯಾಸಕರಾಗಿದ್ದು ಒಳ್ಳೆಯ ಅನುಭವ ಗಳಿಸಿದ್ದರು. ಮೂಲತಃ ಎಡಿನ್ ಬರೋ ವಿಶ್ವವಿದ್ಯಾಲಯದ ಪದವೀಧರರಾಗಿದ್ದ ಅವರು ಪ್ಯಾರಿಸ್‌ನಲ್ಲಿ ಕಾರ್ಯ ನಿರತರಾಗಿದ್ದಾಗ ಇನ್ನೊಬ್ಬ ಎಡಿನ್ ಬರೋದ ಹಳೆಯ ವಿದ್ಯಾರ್ಥಿಯಾಗಿದ್ದ ಜೇಮ್ಸ್‌ಸೈಮ್ ಜೊತೆ ಸಹಯೋಗ ದೊರೆತಿತ್ತು. ಸೈಮ್ ಮುಂದೆ ಎಡಿನ್‌ಬರೋದಲ್ಲಿ ಹೆಸರಾಂತ ಶಸ್ತ್ರವೈದ್ಯ ಹಾಗೂ ಬೋಧಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಶಸ್ತ್ರ ಚಿಕಿತ್ಸಾ ವಿಷಯಗಳಲ್ಲಿ ಲಿಸ್ಟರನ ಪ್ರತಿಭೆಯನ್ನು ಗುರುತಿಸಿದ್ದ ವಿಲಿಯಂ ಶಾರ್ಪೆ, ಕೆಲ ಸಮಯ ತಮ್ಮ ಹಳೆಯ ಸ್ನೇಹಿತ, ಜೇಮ್ಸ್ ಸೈಮರ ಮಾರ್ಗದರ್ಶನದಲ್ಲಿ ಎಡಿನ್ ಬರೋದಲ್ಲಿ ಅವನು ತರಬೇತಿ ಪಡೆಯಬೇಕೆಂದು ಅಭಿಲಾಷೆ ಹೊಂದಿದ್ದರು. ರಸಾಯನ ಶಾಸ್ತ್ರದ ಬೋಧಕರಾದ ಥಾಮಸ್ ಗ್ರಹಾಮ್ ಕೂಡ ಲಿಸ್ಟರ್ ವೈದ್ಯಕೀಯ ಕಲಿಕೆಯಲ್ಲಿ ಉತ್ತಮ ಮಾರ್ಗದರ್ಶನ ನೀಡಿದರು. ವೈದ್ಯಕೀಯ ಮತ್ತು ರಸಾಯನ ಶಾಸ್ತ್ರಗಳ ನಡುವಿನ ನಿಕಟ ಸಂಪರ್ಕವಿರುವುದನ್ನು ಲಿಸ್ಟರ್ ಅವರ ಭಾಷಣಗಳಿಂದಲೇ ತಿಳಿದುಕೊಂಡಿದ್ದ.

ಕಣ್ಣಿನ ವಿಷಯಗಳ ಬೋಧಕರಾಗಿದ್ದ ವಾರ್ಟನ್ ಜೋನ್ಸ್ ಎಂಬುವವರು ಲಿಸ್ಟರನಲ್ಲಿ ಸುಪ್ತವಾಗಿದ್ದ ಸಂಶೋಧನಾ ಚಾತುರ್ಯಕ್ಕೆ ನೀರೆರೆದು ಪೋಷಿಸಿದರೆಂದೇ ಹೇಳಬಹುದು. ಮೊದಲಿನಿಂದಲೂ ಪ್ರಾಣಿಪಕ್ಷಿಗಳ ದೇಹದ ಕಾರ್ಯ ವಿಧಾನಗಳಲ್ಲಿ ಆಸಕ್ತಿ ಹೊಂದಿದ್ದ ಲಿಸ್ಟರ್‌ಗೆ ಕಪ್ಪೆ ಕಾಲಿನ ಜಾಲಪಾದದಲ್ಲಿ 'ಉರಿಯೂತ' (INFLAMMATION) ದ ವಿವಿಧ ಹಂತಗಳನ್ನು ಅಭ್ಯಸಿಸುವ ಸಲಹೆ ಮಾಡಿದ್ದರು. ವಿದ್ಯಾರ್ಥಿ ದೆಸೆಯಲ್ಲೇ ಲಿಸ್ಟರ್ ಇಂತಹ ಸಂಶೋಧನೆಗಳಲ್ಲಿ ತೊಡಗಿಸಿಕೊಂಡಿರುತ್ತಿದ್ದನು. ಕಣ್ಣಿನ ಕರಿಯಾಲಿ (IRIS) ಯ ರಂಧ್ರ ಸಂಕುಚನ ಮತ್ತು ವಿಕಸನ ಕ್ರಿಯೆಯಲ್ಲಿ ಎರಡು ಬಗೆಯ ಮಾಂಸಖಂಡಗಳ ಪಾತ್ರವನ್ನು ವಾರ್ಟನ್‌ರ ಸಲಹೆಯಂತೆ ಅಭ್ಯಾಸ ಮಾಡಿದ. ಆ ಸಂಶೋಧನಾ ಲೇಖನ ಹೆಸರಾಂತ ಸೂಕ್ಷ್ಮದರ್ಶಕ ವಿಜ್ಞಾನ ಪತ್ರಿಕೆಯಲ್ಲಿ ಪ್ರಕಟವಾಯಿತು. ಚರ್ಮದಲ್ಲಿ ಮಾಂಸಖಂಡ ಊತಕ ವಿಷಯದಲ್ಲಿ ಲಿಸ್ಟರ್ ಜರುಗಿಸಿದ ಸಂಶೋದನೆಯೂ ಉತ್ತಮ ಮಟ್ಟದ್ದಾಗಿತ್ತೆನ್ನಲಾಗಿದೆ. ಚರ್ಮದಲ್ಲಿನ ಸೂಕ್ಷ್ಮ ಮಾಂಸಖಂಡಗಳು ಸಂಕುಚಿತವಾಗುವುದನ್ನು ಸೂಕ್ಷ್ಮದರ್ಶಕದಲ್ಲಿ ಎಡೆಬಿಡದೆ ಅಭ್ಯಾಸ ಮಾಡಿದ್ದರ ಫಲಶ್ರುತಿ ಅದಾಗಿತ್ತು. ಈ ಸಂಶೋಧನೆಗಳು ವೈದ್ಯರ ಮೆಚ್ಚುಗೆಗೆ ಪಾತ್ರವಾಗಿದ್ದವಲ್ಲದೆ, ಸೂಕ್ಷ್ಮದರ್ಶಕ ಯಂತ್ರವನ್ನು ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದ ಅವನ ತಂದೆಗೂ ಹೆಮ್ಮೆಪಡುವಂತಾಗಿತ್ತು.

ಮೆಡಿಕಲ್ ಸ್ಕೂಲ್‌ನಲ್ಲಿ ಕಲಿಕೆ ಮತ್ತು ಸಂಶೋಧನೆಗಳೆರಡರಲ್ಲೂ ಆಸಕ್ತಿಯಿಂದ ಇರುತ್ತಿದ್ದ ಲಿಸ್ಟರ್ ಅಲ್ಲಿನ ಚರ್ಚಾಕೂಟಗಳಲ್ಲೂ ಪ್ರಮುಖ ಪಾತ್ರ ವಹಿಸುತ್ತಿದ್ದ. ಅಂತಿಮ ಪರೀಕ್ಷೆಯಲ್ಲಿ ಎಲ್ಲಾ ವಿಭಾಗಗಳಲ್ಲೂ ಒಳ್ಳೆಯ ಅಂಕಗಳನ್ನು ಗಳಿಸಿದ್ದ. ಶಸ್ತ್ರ ಚಿಕಿತ್ಸೆ ವಿಷಯದಲ್ಲಿ ತನ್ನ ಹೆಚ್ಚುಗಾರಿಕೆಯನ್ನು ತೋರಿಸಿದ್ದ. ನಂತರ ತರಬೇತಿಯನ್ನು ಪಡೆಯುವಾಗಲೂ ಆ ಕಾಲದ ಹೆಸರಾಂತ ಲಂಡನ್ನಿನ ಶಸ್ತ್ರವೈದ್ಯ ಸರ್ ಜಾನ್ ಎರಿಕ್‌ಸನ್‌ರ ಮಾರ್ಗದರ್ಶನದ ಲಾಭ ಲಿಸ್ಟರ್‌ನದಾಯಿತು. ಆ ಸಮಯದಲ್ಲೇ ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸಿ, ಇನ್ನೊಂದು ವರ್ಷದಲ್ಲೇ ಇಂಗ್ಲೆಂಡಿನ ಪ್ರತಿಷ್ಠಿತ ಸರ್ಜನ್‌ರ ರಾಯಲ್ ಕಾಲೇಜಿನ ಎಫ್.ಆರ್.ಸಿ. ಎಸ್. ಸನ್ನದನ್ನೂ ತನ್ನದಾಗಿಸಿಕೊಂಡ.

ಜೀವನದ ಇಪ್ಪತ್ತಾರು ವಸಂತಗಳನ್ನು ದಾಟಿದ ಯುವಕ ಜೋಸೆಫ್ ಲಿಸ್ಟರ್ ಈಗ ವೃತ್ತಿಯನ್ನು ಆರಂಭಿಸುವ ಸಮಯ. ಲಂಡನ್ ನಗರದಲ್ಲಿ ತನ್ನ ಶಸ್ತ್ರ ಚಿಕಿತ್ಸಾ ವ್ಯವಸಾಯವನ್ನು ಕೈಗೊಳ್ಳಬೇಕೆಂಬ ನಿರ್ಧಾರವೂ ಆಗಿತ್ತು.

ಅದಕ್ಕೂ ಮೊದಲು ಯುರೂಪಿನ ಕೆಲವು ಪ್ರಮುಖ ವೈದ್ಯಕೀಯ ಕೇಂದ್ರಗಳಿಗೆ ಭೇಟಿಕೊಟ್ಟು ಅಲ್ಲಿನ ಬೆಳವಣಿಗೆಗಳನ್ನು ನೋಡಿಬರುವ ಹಂಬಲವೂ ಇತ್ತು. ಆದರೆ ಮೊದಲೇ ಪ್ರಸ್ತಾಪಿಸಿದಂತೆ ಅವನ ನೆಚ್ಚಿನ ಗುರುಗಳಾಗಿದ್ದ ವಿಲಿಯಂ ಶಾರ್ಪೆಯವರ ಆಶಯವನ್ನು ಸಹಾ ಪೂರೈಸಬೇಕಾಗಿತ್ತು. ಈ ಸಮಯದಲ್ಲಿ ಅವರು ಎಡಿನ್‌ಬರೋ ವಿಶ್ವವಿದ್ಯಾಲಯದ ರಾಯಲ್ ಇನ್ಫಮರಿಯಲ್ಲಿ ತಮ್ಮ ಗೆಳೆಯರಾಗಿದ್ದ ಜೇಮ್ಸ್ ಸೈಮರಿಗೆ ಲಿಸ್ಟರ್ ಬಗೆಗೆ ಪರಿಚಯ ಪತ್ರವನ್ನು ನೀಡಿ, ಅಲ್ಲಿ ಕೆಲ ಕಾಲ ಇದ್ದು ಬರಬೇಕೆಂದು ಒತ್ತಾಯಿಸಿದರು. ಸೈಮ್ ಆ ಕಾಲದಲ್ಲಿ ಒಳ್ಳೆಯ ಶಿಕ್ಷಕರು ಎಂದು ಇಂಗ್ಲೆಂಡ್ ಮತ್ತು ಯುರೋಪಿನಲ್ಲೆಲ್ಲಾ ಹೆಸರು ಗಳಿಸಿದ್ದರು. ಲಿಸ್ಟರ್‌ನಂತಹ ಉತ್ಸಾಹೀ ಯುವ ಶಸ್ತ್ರವೈದ್ಯ ಅವರ ಮಾರ್ಗದರ್ಶನದಲ್ಲಿ ಕೆಲಸ ಮಾಡಿ, ಅವರ ರೀತಿ ನೀತಿಗಳನ್ನು ಅಳವಡಿಸಿಕೊಳ್ಳಲು ಸಾಧ್ಯವಾದರೆ ಅವನ ಭವಿಷ್ಯ ಉಜ್ವಲವಾಗುತ್ತದೆಂಬುದು ಅವರ ಅನಿಸಿಕೆಯಾಗಿತ್ತು.

# ೩. ಎಡಿನ್ ಬರೊ ...

ಹತ್ತೊಂಬತ್ತನೆಯ ಶತಮಾನದ ಮಧ್ಯದ ಸಮಯದಲ್ಲಿ ಎಡಿನ್‌ಬರೋ, ಸ್ಕಾಟ್‌ಲ್ಯಾಂಡ್ ಪ್ರಾಂತ್ಯದ ಒಂದು ಸಣ್ಣ ಪಟ್ಟಣವಾಗಿತ್ತು. ಆಧುನಿಕ ಕೈಗಾರಿಕಾ ಕ್ರಾಂತಿ ಆರಂಭವಾಗುತ್ತಿದ್ದುದರ ದ್ಯೋತಕವಾಗಿ ಅಲ್ಲಿ ಹಲವು ಕಾರ್ಖಾನೆಗಳು ತಲೆಯೆತ್ತುತ್ತಿದ್ದವು. ಸರ್ಕಾರಿ ಕೆಲಸಗಳಿಗೆ ಸಂಬಂಧಿಸಿದ ಕೋರ್ಟು ಕಛೇರಿಗಳ ಕೇಂದ್ರ ಬಿಂದುವೂ ಅದಾಗಿತ್ತು. ಎಲ್ಲಕ್ಕಿಂತ ಮಿಗಿಲಾಗಿ ಶೈಕ್ಷಣಿಕ ಕೇಂದ್ರವಾಗಿ ಹೆಸರು ಗಳಿಸಿತ್ತು ಬ್ರಿಟಿಷ್ ರಾಜಮನೆತನದ ಅಭಿದಾನ ಹೊಂದಿದ ರಾಯಲ್ ಇನ್ಫರ್ಮರಿಯೆಂಬ ಆಸ್ಪತ್ರೆಯೂ ಅಸ್ತಿತ್ವಕ್ಕೆ ಬಂದಿತ್ತು. ಅದು ವೈದ್ಯಕೀಯ ಕ್ಷೇತ್ರದ ವಿವಿಧ ವಿಭಾಗಗಳಲ್ಲಿ ಹೊಸ ಹೊಸ ಆವಿಷ್ಕಾರಗಳ ತೊಟ್ಟಿಲಾಗಿತ್ತು. ಅರಿವಳಿಕೆಗಾಗಿ (ANAESTHESIA) ಬಳಕೆ ಬಂದ ಕ್ಲೋರೋಫಾರಂ ಮೊಟ್ಟಮೊದಲ ಪ್ರಯೋಗ ಜರುಗಿದ್ದು ಈ ಆಸ್ಪತ್ರೆಯಲ್ಲೆ. ಶಸ್ತ್ರ ಚಿಕಿತ್ಸಾ ವಿಭಾಗದ ಅಧ್ವರ್ಯುವಾಗಿದ್ದ ಜೇಮ್ಸ್ ಮಿಲ್ಲರ್‌ರ ನೇತೃತ್ವದಲ್ಲಿ ಕ್ಲೋರೋಫಾರಂ ಜನಕ ಜೇಮ್ಸ್ ಸಿಂಪ್ಸನ್ 1847ರ ನವೆಂಬರ್ 15 ರಂದು ಅದರ ಯಶಸ್ವಿ ಪ್ರಯೋಗ ನಡೆಸಿ, ಇತಿಹಾಸ ನಿರ್ಮಿಸಿದ್ದರು. ವಿಲಿಯಂ ಟರ್ನರ್, ಚಾರ್ಲ್ಸ್‌ಬೆಲ್, ಜಾನ್ ಮಿಲ್ಲರ್‌ರಂತಹ ವೈದ್ಯಲೋಕದ ಘಟಾನುಘಟಿಗಳ ಕಾರ್ಯಕ್ಷೇತ್ರ ಎಡಿನ್‌ಬರೋದ ರಾಯಲ್ ಇನ್ಫರ್ಮರಿ. ಬ್ರಿಟಿಷ್ ಶಸ್ತ್ರ ಚಿಕಿತ್ಸಾ ಕ್ಷೇತ್ರದಲ್ಲಿ ಇಂದಿಗೂ ಧ್ರುವತಾರೆಯಂತಿರುವ ಜೇಮ್ಸ್ ಸೈಮ್ಸ್ ತನ್ನ ಪ್ರತಿಭೆಯನ್ನು ಪ್ರಕಟಿಸಲು ಸಾಧ್ಯವಾದದ್ದು ಈ ಸಂಸ್ಥೆಯಲ್ಲೆ. ಮೂಲತಃ ಎಡಿನ್‌ಬರೋ ನಗರದವನೇ ಆದ ಸೈಮ್ (1799-1870) ಅಲ್ಲಿಯೇ ತನ್ನ ವಿದ್ಯಾಭ್ಯಾಸ ಕಾರ್ಯಕ್ರಮಗಳನ್ನು ಮುಗಿಸಿದ್ದರು. ಲಂಡನ್ನಿನ ಕಿಂಗ್ಸ್ ಕಾಲೇಜಿನಲ್ಲಿ ಕೆಲವು ತಿಂಗಳುಗಳು ಕಾರ್ಯ ನಿರ್ವಹಿಸಿದ್ದನು. ಸೈಮ್ ತಮ್ಮ ಜೀವಮಾನವೆಲ್ಲ ಎಡಿನ್‌ಬರೋ ಆಸ್ಪತ್ರೆಗೇ ಮೀಸಲಾಗಿಟ್ಟವರು. ಅಂಗ ರಚನಾ ಶಾಸ್ತ್ರ ಮತ್ತು ಶಸ್ತ್ರ ವೈದ್ಯಶಾಸ್ತ್ರಗಳೆರಡರಲ್ಲೂ ಜನಪ್ರಿಯ ಶಿಕ್ಷಕರಾಗಿದ್ದರು. ಅಲ್ಲಿ ಕ್ಲಿನಿಕಲ್ ಸರ್ಜರಿಯ ಪೀಠದ ಪ್ರಾಚಾರ್ಯರಾಗಿ ಸೈಮ್ 1833 ರಲ್ಲಿ ನೇಮಕವಾಗಿದ್ದರು. ಆ ಸ್ಥಾನದಲ್ಲಿ ಅತ್ಯಂತ ದಕ್ಷತೆಯಿಂದ ಕಾರ್ಯ ನಿರ್ವಹಿಸಿ, ಕೆಲವೇ ವರ್ಷಗಳಲ್ಲಿ ಖ್ಯಾತಿ ಗಳಿಸಿದ್ದರು. ಶಸ್ತ್ರವೈದ್ಯದ ವಿಷಯಗಳಲ್ಲಿ ನಿಖರವಾದ ಅಭಿಪ್ರಾಯಗಳನ್ನು ಹೊಂದಿದ್ದ ಸೈಮ್, ತಾವು ನಿಜವೆಂದು ನಂಬಿದ್ದ ವಿಷಯುಗಳನ್ನು

ವಿರೋಧಿಸುವವರನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುವುದಕ್ಕೆ ಹಿಂಜರಿಯುವವರಲ್ಲ. ಹೀಗಾಗಿ ಅವರಿಗೆ 'ಆಗದಿದ್ದವರು' ಇರುತ್ತಿದ್ದುದರಲ್ಲಿ ಆಶ್ಚರ್ಯವೇನಿಲ್ಲ. ಅಸಾಧಾರಣ ಪ್ರತಿಭೆ ಮತ್ತು ನಡೆ ನುಡಿಗಳಲ್ಲಿ ಸಂಭಾವಿತರೆನಿಸಿಕೊಂಡಿದ್ದ ಸೈಮರಿಗೆ ಅಪಾರ ಸ್ನೇಹಿತರು ಮತ್ತು ಆರಾಧಕರ ಸಂಖ್ಯೆಯೂ ಕಡಿಮೆಯಿರಲಿಲ್ಲ. ಅಂತಹ ಸ್ನೇಹಿತರೊಬ್ಬರ ಮಾರ್ಗದರ್ಶನ ನೆಚ್ಚಿನ ಶಿಷ್ಯನಿಗೆ ದೊರೆಯಬೇಕೆಂಬ ಆಶಯ ಶಾರ್ಪೆಯವರಿಗಿದ್ದುದು ಸಹಜವಾಗೇ ಇತ್ತು.

ಜೋಸೆಫ್ ಲಿಸ್ಟರ್ 1853 ರ ಸೆಪ್ಟೆಂಬರ್‌ನ ಒಂದು ದಿನ ಗುರು ಶಾರ್ಪೆಯವರ ಪರಿಚಯ ಪತ್ರ ಪಡೆದುಕೊಂಡು ಎಡಿನ್‌ಬರೋಗೆ ಪ್ರಯಾಣ ಮಾಡಿದ. ಆ ಕಾಲದ ಸಂಪ್ರದಾಯದಂತೆ ಮುಖಕ್ಷೌರ ಮಾಡಿಸಿಕೊಂಡರೂ ಕಿವಿಗಳ ಪಕ್ಕದಲ್ಲಿ ಉದ್ದನಾಗಿ ಕೂದಲು ಬೆಳೆಸಿ, ತಲೆಗೆ ಸ್ವಲ್ಪ ಎತ್ತರದ ಶಿರಸ್ತ್ರಾಣ ಧರಿಸಿ ಉದ್ದನೆಯ ನಿಲುವಂಗಿಯಂತಹ ಫ್ರಾಕ್ ಕೋಟು (FROCK COAT) ತೊಟ್ಟುಕೊಂಡು ನೀಳಕಾಯದ ಸ್ಫುರದ್ರೂಪಿ ಯುವಕ ಜೋಸೆಫ್ ಲಿಸ್ಟರ್ ಎಡಿನ್‌ಬರೋದಲ್ಲಿ ಜೇಮ್ಸ್ ಸೈಮರ ಎದುರು ಹಾಜರಾದಾಗ ಒಡನೆಯೇ ಅವರ ಗಮನ ಸೆಳೆದನೆಂದು ಹೇಳಬೇಕು. ಮೊದಲೇ ಯಾವುದೋ ಆಕರ್ಷಣೆ ಇದ್ದವರಂತೆ ಅವರು ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡಂತಾಯಿತು. ಮುಂದಿನ ಜೀವನ ಪರ್ಯಂತದ ಸಹಯೋಗಕ್ಕೆ ಅಂದೇ ಬುನಾದಿಯಾಯಿತು. ಕೇವಲ ಒಂದು ತಿಂಗಳು ಎಡಿನ್‌ಬರೋದಲ್ಲಿದ್ದುಕೊಂಡು ಜೇಮ್ಸ್ ಸೈಮರ ಕಾರ್ಯವೈಖರಿಯನ್ನು ವೀಕ್ಷಿಸಿ ಮಾರ್ಗದರ್ಶನ ಪಡೆಯುವ ಸಲುವಾಗಿ ಬಂದಿದ್ದ ಯುವ ಶಸ್ತ್ರ ವೈದ್ಯ, ಅವರ ಆರಾಧಕನಾಗಿ ಶ್ರದ್ಧಾವಂತ ವಿದ್ಯಾರ್ಥಿಯಾಗಿ ಮಹಾನ್ ಸಂಶೋಧಕನಾಗಿ ಲಿಸ್ಟರ್ ಮರುಹುಟ್ಟು ಪಡೆಯುವಂತಾಯಿತು.

ಶಸ್ತ್ರ ಚಿಕಿತ್ಸಾ ವಿಧಾನಗಳಲ್ಲಿ ತರಬೇತಿ ಪಡೆಯುವ ಅಭ್ಯರ್ಥಿಗಳು ಆ ಕಾಲದಲ್ಲಿ ತೀರಾ ಕೆಳದರ್ಜೆಯ ಕೆಲಸಗಳನ್ನು ನಿರ್ವಹಿಸಬೇಕಾಗುತ್ತಿತ್ತು. ಮೊದಲು ಲಿಸ್ಟರ್‌ಗೆ ದೊರೆತದ್ದು 'ಹೆಚ್ಚುವರಿ ಗುಮಾಸ್ತ' (SUPER NUMERY CLERK) ನ ಕೆಲಸ. ಅಂದರೆ ಅದೇನು ಕಛೇರಿಗಳಲ್ಲಿನ ಲೆಕ್ಕ ಪತ್ರ ಬರೆಯುವ ಗುಮಾಸ್ತನ ರೀತಿಯುದಲ್ಲ. ಆಸ್ಪತ್ರೆ ಮತ್ತು ವಾರ್ಡುಗಳಲ್ಲಿ ರೋಗಿಗಳ ಕಾಯಿಲೆಗಳ ಪೂರ್ವಾಪರ ದಾಖಲೆ, ಅವರಲ್ಲಿದ್ದ ವ್ಯಾಧಿಗಳ ಗುಣಲಕ್ಷಣಗಳ ಪರಿಶೀಲನೆ, ರೋಗ ನಿಧಾನಕ್ಕಾಗಿ ಕೈಗೊಳ್ಳುವ ಪರೀಕ್ಷೆ, ಜರುಗಿಸುತ್ತಿದ್ದ ಚಿಕಿತ್ಸಾ ವಿಧಾನಗಳ ದಾಖಲೆ ಇತ್ಯಾದಿಗಳನ್ನು ಕ್ರಮವರಿತು ದಾಖಲಿಸುತ್ತಿರುವ

ಕಾರ್ಯವೆನ್ನಬಹುದು. ಲಿಸ್ಟರ್ ಇಂತಹ ಕೆಲಸಲ್ಲೂ ಆಸಕ್ತಿ ವಹಿಸಿ ಕಾರ್ಯ ನಿರತನಾದ. ನೇರವಾಗಿ ಶಸ್ತ್ರ ಚಿಕಿತ್ಸೆಗಳಲ್ಲಿ ಭಾಗವಹಿಸುವ ಅವಕಾಶಗಳು ಇರುತ್ತಿರಲಿಲ್ಲವಾದರೂ ಸೈಮರಂತಹ ಪ್ರಖ್ಯಾತಿ ಪಡೆದ ಶಸ್ತ್ರ ವೈದ್ಯರು ಕಾರ್ಯ ನಿರತರಾಗಿದ್ದುದನ್ನು ನೋಡುವುದೇ ಒಂದು ಸುವರ್ಣಾವಕಾಶವೆಂದು ಭಾವಿಸಿದ. ಅಂತಹವರ ನಡೆ, ನುಡಿ, ರೋಗಿಗಳೊಡನೆ ಅವರ ಸಂಬಂಧ ಮತ್ತು ವಿಷಯಗಳ ಬೋಧನೆಗಳನ್ನು ಅರಿತುಕೊಳ್ಳುವುದೇ ಅಪರೂಪದ ಅನುಭವ. ಕೇವಲ ಒಂದು ತಿಂಗಳಿಗಾಗಿ ಬಂದ ಲಿಸ್ಟರ್ ಕ್ರಿಸ್‌ಮಸ್ ಸಮಯದವರೆಗೂ ಅಲ್ಲಿಂದ ತೆರಳುವ ಮನಸ್ಸು ಮಾಡಲಿಲ್ಲ.

ಆ ವರ್ಷ ಕ್ರಿಸ್‌ಮಸ್ ಸಮಯವನ್ನು ತಂದೆ ತಾಯಿಯರ ಜತೆ ಕಳೆದ ಲಿಸ್ಟರ್ ಮತ್ತೆ ಎಡಿನ್ ಬರೋಗೆ ಹಿಂತಿರುಗಿದ. ಕೇವಲ 3-4 ತಿಂಗಳು ಅಲ್ಲಿ ಕೆಲಸ ಮಾಡುತ್ತಿದ್ದಾಗ ಅವನ ಉತ್ಸಾಹ ಮತ್ತು ಕಾರ್ಯದಕ್ಷತೆಯನ್ನು ಗಮನಿಸಿದ್ದ ಸೈಮ್ ಈ ಸಾರಿ ಮುಂದಿನ ದರ್ಜೆಗೆ ಬಡ್ತಿ ನೀಡಿದ. ಅವನೀಗ ''ಸ್ಥಾನಿಕ ಹೌಸ್ ಸರ್ಜನ್' (RESIDENT HOUSE SURGEON ) ಆಗಿ ಕಾರ್ಯ ನಿರ್ವಹಿಸುವಂತಾದ. ಇಂಗ್ಲೆಂಡಿನ ಪ್ರತಿಷ್ಠಿತ ಎಫ್. ಆರ್.ಸಿ. ಎಸ್. ನಂತಹ ಉನ್ನತ ಪದವಿ ಗಳಿಸಿಕೊಂಡವರಾರಿಗಾದರೂ ಈ ಕೆಲಸಗಳು ತೀರಾ ಕೆಳಸ್ತರದ ಹುದ್ದೆಗಳಾಗಿ ಕಾಣುವುದು ಸಹಜ. ಆದರೆ ಅವನು ಆ ರೀತಿ ಭಾವಿಸಲೇ ಇಲ್ಲ. ಶಸ್ತ್ರ ಚಿಕಿತ್ಸೆಯಂತಹ ಅತ್ಯಂತ ಸಂಕೀರ್ಣ ಹಾಗೂ ನಯ ನಾಜೂಕಿನ ವಿದ್ಯೆಯನ್ನು ಕರತಲಾಮಲಕ ಮಾಡಿಕೊಳ್ಳಲು ಆ ರೀತಿಯಲ್ಲಿ ಕಾರ್ಯ ನಿರತನಾಗಬೇಕಾದುದರ ಪ್ರಾಮುಖ್ಯತೆಯ ಅರಿವು ಅವನಲ್ಲಿತ್ತು. ಹಗಲು ರಾತ್ರಿಗಳ ಪರಿವೆಯೇ ಇಲ್ಲದ ಹಾಗೆ ರೋಗಿಗಳ ಅಭ್ಯಾಸ ಮತ್ತು ಚಿಕಿತ್ಸೆಯಲ್ಲೇ ಕಾಲ ಕಳೆಯುತ್ತಿದ್ದ. ಅವನು ಗಳಿಸಿಕೊಂಡಿದ್ದ ಕಾರ್ಯದಕ್ಷತೆಯನ್ನು ಮನಗಂಡು ಸೈಮ್, ಲಿಸ್ಟರ್ ಕೆಲವು ಬಗೆಯ ಶಸ್ತ್ರ ಚಿಕಿತ್ಸೆಗಳನ್ನು ಸ್ವತಂತ್ರವಾಗಿ ಜರುಗಿಸಲು ಅನುಮತಿ ನೀಡಿದರು. ಅವನ ಮಾರ್ಗದರ್ಶನದಲ್ಲಿ ವೈದ್ಯಕೀಯ ವಿಷಯಗಳನ್ನು ಅರಿತುಕೊಳ್ಳಲು 12 ಜನ ವಿದ್ಯಾರ್ಥಿಗಳು ನೇಮಕವಾಗಿದ್ದರು. ಅವರಿಗೆ ತಾನೊಬ್ಬ ಶಿಕ್ಷಕನೆಂಬ ಭಾವನೆಯನ್ನು ತೊರೆದು ತನ್ನ ಸಹಪಾಠಿಗಳೆಂತಲೇ ಪರಿಗಣಿಸುತ್ತಿದ್ದ. ಅವರಿಗೆಲ್ಲ ಒಳ್ಳೆಯ ಮಾರ್ಗದರ್ಶಕನಾಗಿದ್ದು ಅವರ ಪ್ರೀತಿ ವಿಶ್ವಾಸಗಳನ್ನು ಗಳಿಸಿಕೊಂಡಿದ್ದ. ವಿಭಾಗದ ಮುಖ್ಯಸ್ಥ 'ಮಾಸ್ಟರ್' ಜೇಮ್ಸ್ ಸೈಮ್ ಅಲ್ಲಿನ ಎಲ್ಲಾ ವಿಚಾರಗಳಲ್ಲೂ ಪ್ರಮುಖನಾಗಿದ್ದರೂ, ವಿದ್ಯಾರ್ಥಿಗಳಿಗೆ ಲಿಸ್ಟರ್‌ನೇ

'ಚೀಫ್' ಆಗಿಬಿಟ್ಟಿದ್ದ. ಅವರೆಲ್ಲ ಅವನಿಂದ ಬರೇ ಕಲಿಯುವ ವಿದ್ಯಾರ್ಥಿಗಳಂತಾಗಿರದೇ ಸ್ನೇಹಪರ ಸಹೋದ್ಯೋಗಿಗಳಂತೆ ಕೆಲಸ ಮಾಡುತ್ತಿದ್ದರು. ಲಿಸ್ಟರ್ ಕೂಡ ಪಾಠ ಪ್ರವಚನಗಳೇ ಅಲ್ಲದೆ ಮನರಂಜನೆಯ ಆಟಗಳು, ವಿಹಾರದ ಕಾರ್ಯಕ್ರಮಗಳಲ್ಲೂ ಒಂದಾಗಿ ಬೆರೆತು ಹೋಗುತ್ತಿದ್ದ. ಲಿಸ್ಟರ್ ತನ್ನ ಸಹೋದ್ಯೋಗಿಗಳ ಜತೆ ಅದೆಷ್ಟು ತನ್ಮಯನಾಗಿ ಕ್ರೀಡೆಗಳಲ್ಲಿ ಭಾಗವಹಿಸುತ್ತಿದ್ದನೆಂದರೆ, ಒಂದು ಸಾರಿ ಜೀವವನ್ನೇ ಕಳೆದುಕೊಳ್ಳುವಷ್ಟು ಅಪಾಯದಲ್ಲಿ ಸಿಲುಕಿಹಾಕಿಕೊಂಡಿದ್ದ. ಎಡಿನ್‌ಬರೋ ಹತ್ತಿರದ ಸಣ್ಣ ಪರ್ವತ ಪ್ರದೇಶವನ್ನು ಹತ್ತಿ ಇಳಿದು ಸಂತಸ ಪಡುವುದು ಅವನ ತಂಡದ ಹವ್ಯಾಸವಾಗಿ ಬಿಟ್ಟಿತ್ತು. ಸಹಪಾಠಿಯೊಬ್ಬನ ಅಚಾತುರ್ಯದಿಂದ ಬೆಟ್ಟದ ಮೇಲಿಂದ ಉರುಳಿದ ಲಿಸ್ಟರ್ ಪ್ರಪಾತಕ್ಕೆ ಬಿದ್ದು ಕೈಕಾಲು ಮುರಿದು ಜೀವವನ್ನೇ ಕಳೆದುಕೊಳ್ಳುವ ಸನ್ನಿವೇಶ ಅದಾಗಿತ್ತು. ಅದು ಹೇಗೋ ಅರ್ಧ ಮಾರ್ಗದಲ್ಲೇ ತಡೆಯಾಗಿ ಬಚಾವಾದನಂತೆ. ಈ ಪ್ರಕರಣಕ್ಕೆ ಕಾರಣನಾದ ಜಾನ್ ಬೆಡ್ಡೋ, ಲಿಸ್ಟರ್‌ನ್ ಅಂತ್ಯವೇನಾದರೂ ಆಗಿದ್ದರೆ ಮಾನವ ಕುಲಕ್ಕೇ ಅದೆಷ್ಟು ಅಪಕಾರವಾಗುತ್ತಿತ್ತೆಂದು ಮುಂದೊಂದು ಸಾರಿ ತನ್ನ ಲೇಖನದಲ್ಲಿ ನೊಂದುಕೊಂಡು ಬರೆದಿದ್ದಾನೆ.

ಆ ಕಾಲದ ಎಲ್ಲಾ ಆಸ್ಪತ್ರೆಗಳಂತೆ, ಎಡಿನ್ ಬರೋ ಆಸ್ಪತ್ರೆಯೂ ಅಶುಚಿಯ ಆಗರವಾಗಿತ್ತು. ಸರಿಯಾಗಿ ತರಬೇತಿ ಹೊಂದದ ದಾದಿಯರದ್ದೇ ಅಲ್ಲಿಯ ಕಾರ್ಯಭಾರ. ಅವರ ಕಾರ್ಯ ಚಟುವಟಿಕೆಗಳನ್ನು ಸುಸೂತ್ರವಾಗಿ ನಿರ್ವಹಿಸುವುದೇ ತ್ರಾಸದಾಯಕವಾಗಿತ್ತು. ಸೈಮ್‌ರ ವಿಭಾಗದಲ್ಲಿ 72 ರೋಗಿಗಳಿಗೆ ಅವಕಾಶವಿದ್ದು, ಅವು ಸದಾ ಜನಭರಿತವಾಗಿರುತ್ತಿದ್ದವು. ವ್ಯವಸ್ಥಿತ ತರಬೇತಿ ಪಡೆಯದ ದಾದಿಯರು ತಮಗಿಷ್ಟಬಂದಂತೆ ಕೆಲಸ ಮಾಡುತ್ತಿದ್ದರು. ಅಷ್ಟೇನೂ ಹೆಚ್ಚಿನ ಶಸ್ತ್ರಚಿಕಿತ್ಸೆಗಳು ಜರುಗದಿದ್ದರೂ, ಅದಕ್ಕೊಳಗಾದವರ ಶುಶ್ರೂಷೆ ತೃಪ್ತಿಕರವಾಗಿರಲಿ. ಇಂತಹ ಪರಿಸ್ಥಿತಿಯಲ್ಲಿ ಅವರೆಲ್ಲ ಜೀವಂತವಾಗಿ ಉಳಿಯುವುದೇ ಅಪರೂಪವೆನ್ನಬಹುದು. ನಿದ್ರಾಜನಕ ಮದ್ದುಗಳನ್ನು ಯಥೇಚ್ಛವಾಗಿ ನೀಡಿ ರೋಗಿಗಳು ಗಲಾಟೆ ಮಾಡದಂತೆ ಮಲಗಿಸಿಬಿಡುತ್ತಿದ್ದರು. ವಿಪರೀತ ರಕ್ತ ಸ್ರಾವವಾಗಿಯೋ, ಕೀವು ಸುರಿದೋ ಯಾರ ಗಮನಕ್ಕೂ ಬಾರದೇ ಬಹುಪಾಲು ರೋಗಿಗಳು ಇಹಲೋಕ ತ್ಯಜಿಸುತ್ತಿದ್ದರು. ಸರಿಯಾದ ಮೇಲ್ವಿಚಾರಣೆ ಮಾಡುವವರೇ ಇಲ್ಲದೆ ಆಸ್ಪತ್ರೆ ನಾಯಕತ್ವವಿಲ್ಲದ ರಣರಂಗದಂತಿರುತ್ತಿತ್ತು.

ಲಿಸ್ಟರ್ ಮತ್ತು ಸಹೋದ್ಯೋಗಿಗಳು ಅಂತಹ ಪರಿಸರಕ್ಕೆ ಹೊಂದಿಕೊಂಡು ಕಾರ್ಯ ನಿರ್ವಹಿಸಬೇಕಾಗಿತ್ತು.

ಜೋಸೆಫ್ ಲಿಸ್ಟರ್ ಎಡಿನ್‌ಬರೋದಲ್ಲಿ ಕಾರ್ಯ ಆರಂಭಿಸಿದ ಒಂದೇ ವರ್ಷದಲ್ಲಿ, ಜೇಮ್ಸ್ ಸೈಮ್‌ರ ಪ್ರಮುಖ ಹಾಗೂ ನಿಷ್ಠಾವಂತ ಸಹಾಯಕ ಆರ್.ಜೆ. ಮೆಕೆಂಜೀ ಅಕಾಲ ಮರಣಕ್ಕೀಡಾದರು. ಮುಂದೆ ಸೈಮ್‌ರ ಉತ್ತರಾಧಿಕಾರಿಯಾಗಬಹುದೆಂಬ ಭರವಸೆ ಮೂಡಿಸಿದ್ದ ಮೆಕೆಂಜಿಯ ಅಗಲಿಕೆ ಆಸ್ಪತ್ರೆಯಲ್ಲೇ ಅಲ್ಲದೆ ಎಡಿನ್‌ಬರೋ ರಾಯಲ್ ಕಾಲೇಜಿನಲ್ಲೂ ಅವನ ಕೆಲಸ ಕಾರ್ಯದ ನಿರ್ವಹಣೆಗೆ ಬಹಳಷ್ಟು ತೊಂದರೆಗಳುಂಟಾದವು. ಸೈಮ್ ಆ ಜವಾಬ್ದಾರಿಗಳನ್ನು ನಿಭಾಯಿಸಲು ಲಿಸ್ಟರ್‌ನೇ ಸರಿಯಾದ ವ್ಯಕ್ತಿಯೆಂದು ಪರಿಗಣಿಸಿದರು. ಲಿಸ್ಟರ್‌ನ ಎಳೆಯ ವಯಸ್ಸು ಹಾಗೂ ವೃತ್ತಿ ಜೀವನದಲ್ಲೂ ಹೆಚ್ಚು ಹಿರಿತನವಿರದ ಅವನ ಕಾರ್ಯದಕ್ಷತೆಗೆ ಅದು ಸಾಕ್ಷಿಯಾಗಿತ್ತೆನ್ನಬಹುದು. ಆದರೂ ಲಿಸ್ಟರ್‌ಗೆ ತನ್ನ ಪ್ರತಿಭೆಯಲ್ಲಿ ಅದೆಷ್ಟು ಆತ್ಮವಿಶ್ವಾಸವಿತ್ತೆನ್ನುವುದನ್ನು ಆ ಸಮಯದಲ್ಲಿ ಅವನ ಪತ್ರದಿಂದ ಅರಿತುಕೊಳ್ಳಲು ಸಾಧ್ಯ. "ಇನ್ನೊಬ್ಬ ರಾಬರ್ಟ್ ಲಿಸ್ಟನ್ ಅಥವಾ ಜೇಮ್ಸ್ ಸೈಮ್‌ರಷ್ಟು ಘನತೆಯನ್ನು ಪಡೆಯಬೇಕೆಂಬ ನಿರೀಕ್ಷೆಯನ್ನೇನೂ ಇಟ್ಟುಕೊಂಡಿಲ್ಲ. ಪ್ರಾಮಾಣಿಕತೆ ಹಾಗೂ ನೈಜತೆಯಿಂದ ಕಾರ್ಯ ನಿರ್ವಹಿಸಬಲ್ಲೆ; ರೋಗಿಗಳ ವಿಷಯದಲ್ಲಿ ನಾನು ತೆಗೆದುಕೊಳ್ಳುವ ನಿರ್ಧಾರಗಳು ಸಾಕಷ್ಟು ಸರಿಯಾಗಿರುತ್ತವೆಂದು ಹೇಳಬಲ್ಲೆ. ನಾನೀಗ ಪ್ರಯತ್ನಿಸುತ್ತಿರುವ ಹುದ್ದೆಗೆ ಅವುಗಳೇ ನನ್ನ ಅರ್ಹತೆಗಳೆಂದು ಭಾವಿಸುತ್ತೇನೆ. ನಾನೇನೂ ಅತ್ಯಂತ ಪ್ರತಿಭಾವಂತ ಅಥವಾ ಬುದ್ಧಿವಂತನೆಂದು ಹೇಳಿ ಕೊಳ್ಳುವುದಿಲ್ಲ. ಆದರೂ ಕಷ್ಟಪಟ್ಟು ಕೆಲಸ ಮಾಡಿ ಆ ಹುದ್ದೆಗೆ ಅರ್ಹನೆಂದು ಹೇಳಿಕೊಳ್ಳುವುದಿಲ್ಲ. ಆದರೂ ಕಷ್ಟಪಟ್ಟು ಕೆಲಸ ಮಾಡಿ ಆ ಹುದ್ದೆಗೆ ಅರ್ಹನೆಂಬುವುದನ್ನು ಸಾಧಿಸಿ ತೋರಿಸುವ ಭರವಸೆ ನನಗಿದೆ." ಎಂದು ತನ್ನ ತಂದೆಗೆ ಪತ್ರ ಬರೆದಿದ್ದ.

ಲಿಸ್ಟರ್ ಇಷ್ಟಪಟ್ಟ ಹುದ್ದೆಯೇನೋ ನಿರಾಯಾಸವಾಗಿ ದೊರಕಿತು. ಆದರೆ ಎರಡು ಹುದ್ದೆಗಳ ಜವಾಬ್ದಾರಿ ಅವನೊಬ್ಬನದೇ ಆಗಿಬಿಟ್ಟಿತು. ಮೆಕಂಜಿಯವರು ನಿರ್ವಹಿಸುತ್ತಿದ್ದ ಕಾರ್ಯಭಾರಗಳು ಅವನ ಬಹುಪಾಲು ಸಮಯವನ್ನು ಆವರಿಸಿಕೊಂಡು ಬಿಡುತ್ತಿದ್ದವು. ಜತೆಗೆ ಸ್ವಲ್ಪ ಸಮಯದ ಹಿಂದೆ ಖಾಸಗಿ ಪ್ರಾಕ್ಟೀಸ್‌ಗಾಗಿ ಪ್ರತ್ಯೇಕ ಸಲಹಾ ಕೊಠಡಿಯನ್ನು ತೆರೆದಿದ್ದ. ಇಷ್ಟೆಲ್ಲಾ

ಸಾಲದೆಂಬಂತೆ ಎಡಿನ್‌ಬರೋ ರಾಯಲ್ ಕಾಲೇಜ್ ಆಫ್ ಸರ್ಜನ್ಸ್‌ನ ಫೆಲೋಷಿಪ್ (ಎಫ್. ಆರ್.ಸಿ.ಎಸ್.) ಪರೀಕ್ಷೆಗೆ ಕುಳಿತಕೊಳ್ಳುವ ಸಲುವಾಗಿ ಅಭ್ಯಾಸವೂ ಮುಂದುವರಿಯುತ್ತಿತ್ತು. ಈ ಸಮಯದಲ್ಲೇ ಒಂದು ತಿಂಗಳು ಬಿಡುವು ಮಾಡಿಕೊಂಡು ಪ್ಯಾರಿಸ್‌ನ ಕೆಲವು ಪ್ರಖ್ಯಾತ ಶಸ್ತ್ರ ಚಿಕಿತ್ಸಾ ಕೇಂದ್ರಗಳಿಗೆ ಭೇಟಿಯಿತ್ತು ಅಲ್ಲಿಯ ರೀತಿ ನೀತಿಗಳನ್ನು ಅರಿತುಕೊಂಡು ಬಂದನು. ವಾಪಸ್ಸು ಬಂದು ಮತ್ತೆ ಎಂದಿನ ಕೆಲಸ ಕಾರ್ಯಗಳಲ್ಲಿ ತಲ್ಲೀನನಾಗಿಬಿಟ್ಟ.

ಆಸ್ಪತ್ರೆಯಲ್ಲಿ ರೋಗಿಗಳ ಶುಶ್ರೂಷೆಯ ಕೆಲಸಗಳಲ್ಲಿ ತೊಡಗಿಸಿಕೊಳ್ಳುವಂತೆಯೇ, ಸಂಶೋಧನೆಗಳನ್ನು ನಡೆಸುವುದು ಜೋಸೆಫ್ ಲಿಸ್ಟರ್‌ನ ಅಭಿರುಚಿಗಳಲ್ಲೊಂದಾಗಿತ್ತು. ಕಪ್ಪೆಗಳ ಕಾಲಿನ ತೆಳುವಾದ 'ಜಾಲಪಾದ' (WEB OF FOOT) ವನ್ನು ವೀಕ್ಷಿಸಿ ಉರಿಯೂತದ ಪರಿಯ ಬಗೆಗೆ ಅವನು ನಡೆಸುತ್ತಿದ್ದ ಶೋಧನೆಗಳನ್ನು ಈ ಮೊದಲೇ ಪ್ರಸ್ತಾಪಿಸಲಾಗಿದೆ. ಅದೇ ಸಂಶೋಧನೆಯನ್ನು ಮುಂದುವರಿಸಿ ಅವುಗಳನ್ನು ಬೇರೆ ಬೇರೆ ಪರಿಸರಗಳಿಗೊಡ್ಡಿದಾಗ ಉಂಟಾಗುವ ಬದಲಾವಣೆಗಳನ್ನು ಅಭ್ಯಸಿಸುವುದು ಮತ್ತೆ ಶುರುವಾಯಿತು. ಜಾಲಪಾದವನ್ನು ತಣ್ಣೀರು, ಬಿಸಿ ನೀರುಗಳ ಸಂಪರ್ಕಕ್ಕೆ ತಂದಾಗ ಆಗುವ ಪರಿಣಾಮಗಳನ್ನು ಅಭ್ಯಸಿಸಿದ ಹಾಗೆಯೇ ವಿವಿಧ ರಾಸಾಯನಿಕಗಳು ಮತ್ತು ಅವುಗಳ ಮಿಶ್ರಣಗಳೊಡನೆಯೂ ಸಂಪರ್ಕಿಸಿದ. ಈ ರೀತಿಯ ಬದಲಾದ ಪರಿಸ್ಥಿತಿಗಳಿಂದ ಜಾಲಪಾದದ ಲೋಮನಾಳಗಳಲ್ಲಾಗುತ್ತಿದ್ದ ಬದಲಾವಣೆಗಳನ್ನು ತಿಳಿದುಕೊಳ್ಳುವಂತಾಯಿತು; ಮತ್ತು ಉರಿಯೂತ ಉಂಟಾಗುವಾಗಿನ ಮೊದಲ ಹಂತಗಳನ್ನು ಗುರುತಿಸಲು ಸಾಧ್ಯವಾಯಿತು. ಈ ಪ್ರಯೋಗಗಳಲ್ಲಿ ಅವನೆಷ್ಟು ತೊಡಗಿಸಿಕೊಳ್ಳುತ್ತಿದ್ದನೆಂದರೆ ಕೆಲವು ಸಾರಿ ರಾತ್ರಿಯೂ ನಿದ್ದೆಗೆಟ್ಟು ಪ್ರಯೋಗಾಲಯದಲ್ಲಿರಬೇಕಾಗುತ್ತಿತ್ತು. ಒಂದು ರಾತ್ರಿ 2 ಗಂಟೆಗೆ ಮಲಗಿದವನು ಮತ್ತೆ 4 ಗಂಟೆಗೆ ಎದ್ದು ಜಾಲಪಾದದಲ್ಲಿ ಉರಿಯೂತದಿಂದ ಉಂಟಾದ ಬದಲಾವಣೆಗಳನ್ನು ವೀಕ್ಷಿಸಿ ಟಿಪ್ಪಣಿ ಮಾಡಿಕೊಳ್ಳಬೇಕಾಯಿತು. ಮತ್ತೆ ಕೆಲ ಸಮಯ ಮಲಗಿ, ಬೆಳಿಗ್ಗೆ ಮುಂಚೆ ಎದ್ದು ತರಗತಿಯಲ್ಲಿ ಮಾಡಬೇಕಾಗಿದ್ದ ಭಾಷಣದ ಬಗೆಗೆ ಟಿಪ್ಪಣಿ ಮಾಡಿಕೊಂಡು ನೇರವಾಗಿ ಧಾವಿಸಿದನಂತೆ. ಇನ್ನುಳಿದ ದಿನಗಳಲ್ಲಿ ರಾತ್ರಿ 10 ಗಂಟೆಗೆ ಮಲಗಿ ಬೆಳಿಗ್ಗೆ 5.30 ಕ್ಕೆ ಏಳುವುದು; ಸ್ಟೌವ್ ಹೊತ್ತಿಸಿ ಕಾಫಿಗಿಟ್ಟುಕೊಂಡು, ಅದು ತಯಾರಾಗುತ್ತಿದ್ದಂತಯೇ ಉಡುಗೆ ತೊಟ್ಟುಕೊಳ್ಳುವುದು ಸ್ವಲ್ಪ ಬ್ರೆಡ್ಡಿನ ಜೊತೆಗೆ ಕಾಫಿಯನ್ನು ಗಬಗಬನೆ ಕುಡಿದು

ಆಸ್ಪತ್ರೆಗೆ ಧಾವಿಸುವುದು, ಅಲ್ಲಿಯ ಕೆಲಸಗಳನ್ನು ಮುಗಿಸಿ 10 ಗಂಟೆಗೆ ತರಗತಿಗಳಲ್ಲಿ ಪ್ರವಚನಗಳನ್ನು ನೀಡುವುದಕ್ಕೆ ಓಡುವುದು. ಎಷ್ಟೋ ಸಾರಿ ಕೊನೆಯ ಘಳಿಗೆಯವರೆಗೂ ತರಗತಿಗೆ ತಯಾರಿ ಮುಗಿಯದಿರುವುದರಿಂದ, ಪ್ರವಚನಕ್ಕೆ ತಡವಾಗಿ ಹೋಗುವುದು ಅವನ ದೌರ್ಬಲ್ಯವಾಗಿ ಪರಿಣಮಿಸಿತು. ಅವನು ನೀಡುತ್ತಿದ್ದ ಪ್ರವಚನಗಳು ಹಳೆಯ ಗ್ರಂಥಗಳಲ್ಲಿ ನಮೂದಾಗಿರುತ್ತಿದ್ದ ಹಳಸಲು ಸರಕಾಗಿರದೆ ಬಹುಪಾಲು ಅವನ ಸಂಶೋಧನೆಗಳ ಫಲಿತಾಂಶಗಳು, ಇಲ್ಲವೇ ಹೊಸ ಚಿಂತನೆಗಳ ದೃಷ್ಟಿಕೋನವಾಗಿರುತ್ತಿದ್ದವು. ಉರಿಯೂತದ ಮೊದಲ ಹಂತದಲ್ಲಾಗುವ ಬದಲಾವಣೆಗಳ ಬಗೆಗೆ ಅವನ ಸಂಶೋಧನೆಗಳ ಫಲಿತಾಂಶವನ್ನು ಕುರಿತಾದ ಲೇಖನವನ್ನು 1857ರಲ್ಲಿ ಲಂಡನ್ನಿನ ರಾಯಲ್ ಸೊಸೈಟಿಯ ಸಭೆಯೊಂದರಲ್ಲಿ ಮಂಡಿಸಿ, ಎಲ್ಲರ ಮೆಚ್ಚುಗೆಗೆ ಪಾತ್ರನಾದ.

ಜೋಸೆಫ್‌ಲಿಸ್ಟರ್ ಎಡಿನ್‌ಬರೋದಲ್ಲಿದ್ದ ಅತ್ಯಲ್ಪ ಸಮಯದಲ್ಲೇ ತನ್ನ ಕಾರ್ಯದಕ್ಷತೆ, ಮತ್ತು ಸಂಶೋಧನಾ ರೀತಿ ನೀತಿಗಳಿಂದ ಎಲ್ಲರ ಗಮನ ಸೆಳೆದಿದ್ದರಲ್ಲಿ ಆಶ್ಚರ್ಯವೇನಿಲ್ಲ. ಎಡಿನ್ ಬರೋದಲ್ಲಿ ಅವನೀಗ ಪ್ರಮುಖ ಶಸ್ತ್ರ ವೈದ್ಯರಲ್ಲೊಬ್ಬನೆಂದು ಪರಿಗಣಿಸುವಂತಾಯಿತು. ಅಲ್ಲಿ ಎರಡನೆಯ ವರ್ಷ ಆರಂಭವಾಗುತ್ತಿದ್ದಂತೆಯೇ ರಾಯಲ್ ಇನ್ಫರ್ಮರಿಯಲ್ಲಿ ಅಸಿಸ್ಟೆಂಟ್ ಸರ್ಜನ್ ಹುದ್ದೆಯೂ ಅವನನ್ನು ಅರಸಿಕೊಂಡು ಬಂದಿತು.

ಆಸ್ಪತ್ರೆ ಮತ್ತು ಮೆಡಿಕಲ್ ಸ್ಕೂಲ್‌ಗಳಲ್ಲಿ ಪುರಸೊತ್ತಿಲ್ಲದಷ್ಟು ಕೆಲಸಕಾರ್ಯಗಳಿರುತ್ತಿದ್ದರೂ, ಲಿಸ್ಟರ್ ತನ್ನ ಆರಾಧ್ಯ ದೇವರಂತಿದ್ದ ಪ್ರೊಫೆಸರ್ ಜೇಮ್ಸ್ ಸೈಮರ ವೈಯಕ್ತಿಕವೆನ್ನಬಹುದಾದ ಕೆಲಸ ಕಾರ್ಯಗಳಲ್ಲಿ ಸ್ವಪ್ರೇರಣೆಯಿಂದ ನೆರವಾಗುತ್ತಲೂ ಇರುತ್ತಿದ್ದ. ಅವರು ಆಗಾಗ್ಗೆ ಸಮ್ಮೇಳನಗಳಲ್ಲಿ ಮಾಡುತ್ತಿದ್ದ ಭಾಷಣಗಳನ್ನು ಬರೆದಿಟ್ಟುಕೊಂಡು "ಲ್ಯಾನ್ಸೆಟ್" (LANCET) ನಂಥ ಹೆಸರಾಂತ ವೈದ್ಯಕೀಯ ಪತ್ರಿಕೆಗಳಲ್ಲಿ ಪ್ರಕಟಿಸುವ ಏರ್ಪಾಡು ಮಾಡುತ್ತಿದ್ದ; ಅವರು ಜರುಗಿಸುತ್ತಿದ್ದ ಶಸ್ತ್ರ ಚಿಕಿತ್ಸೆಗಳಿಗೂ ಅವನೇ ಸಹಾಯಕನಾಗಿರುತ್ತಿದ್ದ. ಅವರ ಮನೆಗೂ ಆಗಾಗ್ಗೆ ಭೇಟಿ ನೀಡುತ್ತಿದ್ದು ಕುಟುಂಬ ವರ್ಗದವರ ಮೆಚ್ಚುಗೆಗೂ ಪಾತ್ರನಾಗಿದ್ದ. ಸೈಮ್ ಅವನ ಗುಣ, ನಡತೆ, ಕಾರ್ಯದಕ್ಷತೆ ಮತ್ತು ಎಡಬಿಡದ ಚಟುವಟಿಕೆಗಳಿಗೆ ಮಾರು ಹೋಗಿದ್ದರು. ಇಂತಹ ಯುವಕ ಸೈಮ್‌ರ ಹಿರಿಯ ಮಗಳು ಆಗ್ನೀಸಳ ಮನ ಸೆಳೆದದ್ದು ಅಚ್ಚರಿಯೇನಲ್ಲ.

## ೩.೧ ವಿವಾಹ

ಜೋಸೆಫ್ ಲಿಸ್ಟರ್‌ನ ಜೀವನದ ಪ್ರಮುಖ ಘಟನೆ 1856ರ ಏಪ್ರಿಲ್‌ನಲ್ಲಿ ಜರುಗಿತು. ಗುರು ಹಾಗೂ ಮಾರ್ಗದರ್ಶಕ ಪ್ರೊಫೆಸರ್ ಜೇಮ್ಸ್ ಗಮನ ಸೆಳೆದು ಅವರ ಅಚ್ಚುಮೆಚ್ಚಿನ ಮಗಳು ಆಗ್ನೀಸ್ ಸೈಮ್ ಮನವನ್ನೂ ಗೆದ್ದಿದ್ದ. ಅವರಿಬ್ಬರೂ ಸತಿಪತಿಗಳಾಗುವುದರಲ್ಲಿ ಸ್ವಲ್ಪ ತೊಡಕಿನ ಸಮಸ್ಯೆಯನ್ನು ಎದುರಿಸಬೇಕಾಗಿ ಬಂತು. ಬಹಳ ಕಾಲದಿಂದ ಒಂದು ಸೀಮಿತ ಸಮುದಾಯವೆಂದು ಪರಿಗಣಿಸಲಾಗಿದ್ದ ಕ್ವೇಕರ್ ಸಮಾಜದವರಲ್ಲೇ ಪರಸ್ಪರ ಮದುವೆಗಳು ನಡೆದುಕೊಂಡು ಬಂದಿದ್ದವು. ಲಿಸ್ಟರ್, ಈಗ ಕ್ವೇಕರ್ ಸಮುದಾಯದ 'ಹೊರಗೆ' ವಿವಾಹ ಸಂಬಂಧ ಬೆಳೆಸುವುದು ಕೆಲವರಲ್ಲಿ ಅಸಮಾಧಾನವನ್ನುಂಟು ಮಾಡಿತು. ಜೋಸೆಫ್ ಲಿಸ್ಟರ್‌ನಂತೆಯೇ ಅವನ ತಂದೆ ತಾಯಿಯರೂ ಕಡು ವೈಚಾರಿಕ ಮನೋಭಾವದವರಾಗಿದ್ದುದರಿಂದ ಆ ಬಗೆಗೆ ಅವರು ಹೆಚ್ಚಿನ ವಿರೋಧ ವ್ಯಕ್ತಪಡಿಸಲಿಲ್ಲ. ಮತ ಧರ್ಮಗಳ ಸಂಕುಚಿತ ಭಾವನೆಗಳನ್ನು ಲಿಸ್ಟರ್ ಎಂದೂ ಸಹಿಸುತ್ತಿದ್ದವನಲ್ಲ. ಅವುಗಳ ವಿಧಿ ವಿಧಾನಗಳ ಸಂಸ್ಕಾರಗಳ ಬಗೆಗೂ ಅವನ ವಿರೋಧವಿತ್ತು. ಆಗ್ನೀಸ್ ಸೈಮ್ ಮತ್ತು ಜೋಸೆಫ್ ಲಿಸ್ಟರ್‌ರ ವಿವಾಹ ಜೇಮ್ಸ್ ಸೈಮ್‌ರ ಮನೆಯ ಡ್ರಾಯಿಂಗ್ ರೂಂನಲ್ಲೆ ಏಪ್ರಿಲ್ 23 ರಂದು ಸರಳ ರೀತಿಯಲ್ಲಿ ನೆರವೇರಿಸಲ್ಪಟ್ಟಿತ್ತು. ಆಗ್ನೀಸ್ ರೂಪ ಸೌಂದರ್ಯಗಳಿಂದಲೇ ಅಲ್ಲದೇ ತನ್ನ ಗುಣಲಕ್ಷಣಗಳಿಂದಲೂ ಜೋಸೆಫ್ ಲಿಸ್ಟರ್‌ಗೆ ಹೇಳಿ ಮಾಡಿಸಿ ದಂತಿದ್ದಳೆಂಬುದರಲ್ಲಿ ಸಂದೇಹವಿರಲಿಲ್ಲ. ಜೀವಮಾನವೆಲ್ಲ ಒಬ್ಬರನ್ನೊಬ್ಬರು ಅರ್ಥೈಸಿಕೊಂಡು ಸಾರ್ಥಕ ಜೀವನ ನಡೆಸಿದರು. ಆಗ್ನೀಸ್ ಬರೇ ಸಂಸಾರದ ಕೆಲಸಕಾರ್ಯಗಳನ್ನು ತೂಗಿಸಿಕೊಂಡಿರುವುದಲ್ಲದೆ ಲಿಸ್ಟರ್‌ನ ವೃತ್ತಿಯ ಹಲವು ಕಾರ್ಯಗಳಲ್ಲೂ ಭಾಗಿಯಾಗಿ ಸದಾ ಅವನ ನೆರಳಿನಂತಿದ್ದಳೆಂಬುದರಲ್ಲಿ ಪ್ರತೀತಿ ಇದೆ.

ವಿವಾಹದ ಮೊದಲ ತಿಂಗಳ ಕೆಲ ಸಮಯ ತಂದೆ ತಾಯಿಯರ ಜತೆ ಅಪ್ಟಾನ್‌ನಲ್ಲಿ ಕಳೆದರು. ನಂತರ ಇಂಗ್ಲೆಂಡಿನ ಕೆಲವು ಪ್ರೇಕ್ಷಣೀಯ ಸ್ಥಳಗಳಲ್ಲಿ ತಿರುಗಾಡಿದರು. ಮುಂದೆ ಯುರೋಪಿನ ಕೆಲವು ವೈದ್ಯಕೀಯ ಕೇಂದ್ರಗಳಿಗೆ ಭೇಟಿ ನೀಡುವ ಕಾರ್ಯಕ್ರಮ. ಅಲ್ಲಿಯ ಆಸ್ಪತ್ರೆಗಳಲ್ಲಿ ಜರುಗುತ್ತಿದ್ದ ಶಸ್ತ್ರ ವೈದ್ಯದ ಪ್ರಗತಿಯನ್ನು ವೀಕ್ಷಿಸಿದರು. ಪ್ರಖ್ಯಾತ ಶಸ್ತ್ರ ವೈದ್ಯರೊಡನೆ ವಿಚಾರ ವಿನಿಮಯ ಮಾಡಿಕೊಂಡರು. ಆ ಸಮಯದಲ್ಲಿ ಅವರು ಆಗಿನ ಹೆಸರಾಂತ ಕೇಂದ್ರಗಳೆನಿಸಿದ್ದ

ಪದುವಾ, ವಿಯೆನ್ನ, ಪ್ರಾಗ್, ವುಜ್ ಬರ್ಗ್, ಲೆಪ್‌ಜಿಗ್, ಬರ್ಲಿನ್‌ನಂತಹ ಆಸ್ಪತ್ರೆಗಳಿಗೆ ಭೇಟಿ ನೀಡಿದ್ದರು.

ಯುರೋಪಿನ ಪ್ರವಾಸದಿಂದ ಹಿಂತಿರುಗಿದ ಲಿಸ್ಟರ್ ದಂಪತಿಗಳು ಎಡಿನ್ ಬರೋದ ರಟಲ್ಯಾಂಡ್ ಬೀದಿಯ ಮನೆಯೊಂದರಲ್ಲಿ ಪ್ರತ್ಯೇಕ ಸಂಸಾರ ಹೂಡಿದರು. ಲಿಸ್ಟರ್, ಮತ್ತೆ ಬಿಡುವಿಲ್ಲದ ಕೆಲಸ ಕಾರ್ಯಗಳಲ್ಲಿ ಮುಳುಗಿ ಹೋದ. ಮನೆ ವಾರ್ತೆಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತಿದ್ದ ಆಗ್ನೀಸ್‌ಳಂತಹ ಪತ್ನಿದೊರಕಿದ್ದು ಅವನ ಅದೃಷ್ಟವೇ ಸರಿ. ಜತೆಗೆ ಗಂಡನ ಕೆಲಸ ಕಾರ್ಯಗಳಲ್ಲಿ ಸಹ ನೆರವಾಗುತ್ತಿದ್ದಳು. ಬೆರಳಚ್ಚು ಯಂತ್ರಗಳಿಂದ ಆ ಕಾಲದಲ್ಲಿ ಲಿಸ್ಟರ್‌ನ ಬಾಷಣಗಳನ್ನು ಬರೆದು ಪ್ರತಿಮಾಡಿಕೊಡುತ್ತಿದ್ದಳು. ಪ್ರತಿದಿನ ಶಸ್ತ್ರ ಚಿಕಿತ್ಸೆಗಳಿಗೆ ಬೇಕಾಗುವ ಶಸ್ತ್ರ ಚಿಕಿತ್ಸಾ ಸಲಕರಣೆಗಳನ್ನು ಆರಿಸಿ ಶುಚಿಗೊಳಿಸುತ್ತಿದ್ದಳು. ಅವುಗಳ ಉಸ್ತುವಾರಿಯ ಕೆಲಸ ಅವಳದೇ ಆಗಿರುತ್ತಿತ್ತು. ಜೀವಮಾನವೆಲ್ಲ ಲಿಸ್ಟರ್ ಜರುಗಿಸುತ್ತಿದ್ದ ಸಂಶೋಧನೆಗಳ ಹಿಂದಿನ ತತ್ವಗಳನ್ನು ಅರ್ಥಮಾಡಿಕೊಂಡಿದ್ದಳು. ಅಂತಹ ಕಾರ್ಯಗಳಲ್ಲಿ ಲಿಸ್ಟರ್‌ಗೆ ಸಹಾಯಕಳಾಗಿದ್ದುಕೊಂಡು ಉತ್ತೇಜನ ಕೊಡುತ್ತಿದ್ದಳು. ಎಡೆಬಿಡದೆ ಕೆಲಸ ಕಾರ್ಯಗಳಲ್ಲಿ ತಲ್ಲೀನನಾಗಿರುತ್ತಿದ್ದ ಪತಿಯ ಇಷ್ಟಾರ್ಥಗಳನ್ನು ಅರಿತುಕೊಂಡು ಅವನಿಗೆ ಸ್ವಲ್ಪವೂ ಅನಾನುಕೂಲತೆಗಳಾಗದಂತೆ ನೋಡಿಕೊಳ್ಳುತ್ತಿದ್ದಳು. ಅಪ್ರತಿಮ ಸುಂದರಿಯಾಗಿದ್ದ ಆಗ್ನೀಸ್, ತನ್ನ ನಡೆ ನುಡಿ ಮತ್ತು ಕಾರ್ಯಗಳಿಂದ ಪತಿಯ ಮನಸ್ಸನ್ನು ಗೆದ್ದುಕೊಂಡಿದ್ದಳು. ಇಷ್ಟೆಲ್ಲಾ ಕೆಲಸ ಕಾರ್ಯಗಳ ನಡುವೆ ವಿಶ್ವವಿಖ್ಯಾತನಾಗುತಿದ್ದ ಪತಿಯೊಡನೆ ಚರ್ಚಿಸಲು ಬರುತ್ತಿದ್ದ ಅತಿಥಿ ಅಭ್ಯಾಗತರನ್ನು ಸತ್ಕರಿಸುವುದರಲ್ಲೂ ನಿಷ್ಣಾತಳಾಗಿದ್ದಳು.

## ೪. ಗ್ಲಾಸ್ಗೋ....

ಹದಿನೆಂಟನೆಯ ಶತಮಾನದಲ್ಲಿ ಗ್ಲಾಸ್ಗೋ, ಸ್ಕಾಟ್‌ಲ್ಯಾಂಡ್ ಪ್ರಾಂತ್ಯದ ಒಂದು ಚಿಕ್ಕ ಬಂದರು ಪಟ್ಟಣ. ಹತ್ತೊಂಬತ್ತನೆಯ ಶತಮಾನದ ಔದ್ಯೋಗಿಕ ಕ್ರಾಂತಿಯ ಸುಳಿಯಲ್ಲಿ ಸಿಕ್ಕಿ ಅದರ ಚಟುವಟಿಕೆಗಳೂ ಬಿರುಸಾಗಿ ಊರ್ಜಿತಗೊಳ್ಳಲಾರಂಭಿಸಿದವು. ಹಲವಾರು ಕಾರ್ಖಾನೆಗಳು ಅಲ್ಲಿ ತಲೆಯೆತ್ತಿದವು, ಎಲ್ಲಾ ಕ್ಷೇತ್ರಗಳಲ್ಲಾಗುತ್ತಿದ್ದ ಪ್ರಗತಿಯ ಸಂಕೇತದಂತೆ, ಅಲ್ಲಿ ಬಹಳ ಸಮಯದಿಂದ ಇದ್ದ ವಿಶ್ವವಿದ್ಯಾಲಯ ಕೂಡ ವಿಸ್ತಾರಗೊಂಡು ಹೆಚ್ಚುತ್ತಿರುವ ಶೈಕ್ಷಣಿಕ ಅವಶ್ಯಕತೆಗಳಿಗೆ ಸ್ಪಂದಿಸಿತು. ಜನರ ವೈದ್ಯಕೀಯ ಅವಶ್ಯಕತೆಗಳಿಗಾಗಿ ಅಲ್ಲಿದ್ದ ಆಸ್ಪತ್ರೆಯಲ್ಲಿ 1710ರಷ್ಟು ಹಿಂದೆಯೇ ಮೆಡಿಕಲ್ ಸ್ಕೂಲ್ ಒಂದು ಸ್ಥಾಪನೆಯಾಗಿ, ವೈದ್ಯರ ತರಬೇತಿಯ ಕೇಂದ್ರವಾಗಿತ್ತು. ಅದರ ಸ್ಥಾಪಕ ವಿಲಿಯಂ ಕುಲ್ಲೆನ್ ಹೆಸರಾಂತ ಶಸ್ತ್ರವೈದ್ಯರಾಗಿದ್ದರು. ಶಸ್ತ್ರ ವೈದ್ಯದ ಕಲಿಕೆಯ ಪೀಠ 1815ರಲ್ಲಿ ಜಾನ್ ಬರ್ನ್ಸ್ ಎಂಬುವವರಿಂದ ಮೊದಲು ಆರಂಭವಾಯಿತು. ಅವರ ನಂತರ ಜೇಮ್ಸ್ ಲಾರಿ ಎಂಬುವವರು ಆ ಪೀಠವನ್ನಲಂಕರಿಸಿದರು. ಅವರು 1859ರಲ್ಲಿ ಗತಿಸಿದಾಗ ಆ ಪೀಠ ಖಾಲಿಯಾಯಿತು. ಹಾಗೆ ಖಾಲಿಯಾದ ಪೀಠದ ಮುಖ್ಯಸ್ಥರ ಸ್ಥಾನಕ್ಕೆ ತೀವ್ರ ಪೈಪೋಟಿ ಇರುವಂತಿತ್ತು. ಏಳು ಜನ ಅಭ್ಯರ್ಥಿಗಳಲ್ಲಿ ಐವರು ಗ್ಲಾಸ್ಗೋದವರೇ ಇದ್ದರು. ಲಿಸ್ಟರ್‌ಗೆ ಆ ಹುದ್ದೆಯಲ್ಲಿ ಆಸಕ್ತಿ ಇರಲಿಲ್ಲ. ಆದರೂ ಹಿತೈಷಿಗಳ ಮತ್ತು ಸ್ನೇಹಿತರ ಒತ್ತಾಯಕ್ಕೆ ಮಣಿದು ಅವನೂ ಒಬ್ಬ ಅಭ್ಯರ್ಥಿಯಾದ. ಒಳ್ಳೆಯ ಶಿಕ್ಷಕ, ದಕ್ಷವೈದ್ಯ ಹಾಗೂ ಚುರುಕು ಬುದ್ಧಿಯವನೆಂದು ಪ್ರಖ್ಯಾತಿ ಪಡೆದಿದ್ದ ಜೋಸೆಫ್ ಲಿಸ್ಟರ್ ಮಿಕ್ಕೆಲ್ಲ ಅಭ್ಯರ್ಥಿಗಳನ್ನು ಹಿಂದೆ ಹಾಕಿ ಆ ಪೀಠಕ್ಕೆ ಆಯ್ಕೆಯಾದಾಗ ಅವನಿಗೆ ಕೇವಲ 33 ವರ್ಷ. ಸ್ವಂತ ಯೋಗ್ಯತೆಯಿಂದ ಸ್ವಾಭಾವಿಕವಾಗಿ ಆಯ್ಕೆಯಾಗಿದ್ದರೂ, ಪ್ರಭಾವಶಾಲಿಯಾದ ಮಾವ ಜೇಮ್ಸ್ ಸೈಮರ ಕೈವಾಡದಿಂದಲೇ ಲಿಸ್ಟರ್‌ಗೆ ಆ ಪಟ್ಟ ದೊರೆಯಿತೆಂಬ ಟೀಕೆ ಅಸಂತೃಪ್ತ ವಲಯದಲ್ಲುಂಟಾಗಿದ್ದವು.

ಲಿಸ್ಟರ್, ಗ್ಲಾಸ್ಗೋಗೆ ಬಂದು ನೆಲಸುವಷ್ಟರಲ್ಲೆ ಆ ನೌಕಾಪಟ್ಟಣ ಅಭಿವೃದ್ಧಿಯ ಹಾದಿಯಲ್ಲಿ ಬಹಳಷ್ಟು ಮುಂದುವರಿದಿತ್ತು. ಇಂಗ್ಲೆಂಡಿನ ಇತರ ಕಡೆ ಬಿರುಸಿನಿಂದ ಸಾಗುತ್ತಿದ್ದ ಕೈಗಾರಿಕೀಕರಣ ಅಲ್ಲಿಯೂ ವ್ಯಾಪಿಸಿತ್ತು. ಆಯಕಟ್ಟಿನ ತಾಣದಲ್ಲಿದ್ದ ಆ ಬಂದರಿನಿಂದಲೇ ಅಮೆರಿಕಕ್ಕೆ ಸರಕು ಸಾಗಾಣಿಕೆಯ

ರಪ್ತು ವ್ಯಾಪಾರ ಸಾಕಷ್ಟು ಬಿರುಸಿನಿಂದ ಜರುಗುತ್ತಿತ್ತು. ಇವೆಲ್ಲದರ ಪರಿಣಾಮದಿಂದ ಜನಸಂಖ್ಯೆಯೂ ಹೆಚ್ಚಿತು. ಆಸ್ಪತ್ರೆಗೆ ಬರುವವರ ಪ್ರಮಾಣವೂ ಏರುವುದು ಅನಿವಾರ್ಯವಾಯಿತು. ಕಾರ್ಖಾನೆಗಳಲ್ಲಿ ಆಕಸ್ಮಿಕಗಳು ಹೆಚ್ಚಾದಂತೆ ಕೈಕಾಲು ಮುರಿತದ ಪ್ರಕರಣಗಳು ಆಸ್ಪತ್ರೆಯಲ್ಲಿ ದಾಖಲಾಗುವುದು ಕೂಡಾ ಹೆಚ್ಚಾಯಿತು. ತತ್ಸಂಬಂಧವಾಗಿ ಶಸ್ತ್ರ ಚಿಕಿತ್ಸೆಗಳಾಗುವ ಅವಕಾಶಗಳು ವಿಪರೀತವಾದವು. ಜೋಸೆಫ್ ಲಿಸ್ಟರ್ ಮೆಡಿಕಲ್ ಸ್ಕೂಲಿನಲ್ಲಿ ಶಸ್ತ್ರಚಿಕಿತ್ಸಾ ವಿಭಾಗದ ಪ್ರಾಚಾರ್ಯನಾಗಿ ನೇಮಕವಾಗಿದ್ದರೂ, ಆಗಿನ ಕೆಲವು ನಿಯಮಗಳಿಗನುಸಾರವಾಗಿ ಆಸ್ಪತ್ರೆಯಲ್ಲಿ ತನ್ನ ಕೆಲಸ ಕಾರ್ಯಗಳನ್ನು ಕೂಡಲೇ ಜರುಗಿಸುವಂತಿರಲಿಲ್ಲ. ಅದಕ್ಕೆ ಪ್ರತ್ಯೇಕ ನೇಮಕಾತಿಯ ವಿಧಿ ವಿಧಾನಗಳು ಜರುಗುವುದಕ್ಕೆ ಒಂದು ವರ್ಷವೇ ಬೇಕಾಯಿತು.

ಸದಾ ಒಂದಿಲ್ಲೊಂದು ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವ ಲಿಸ್ಟರ್, ಸುಮ್ಮನೇ ಕಾಲಹರಣ ಮಾಡಲಿಲ್ಲ. ಗ್ಲಾಸ್ಗೋ ಸ್ಕೂಲಿನಲ್ಲಿ ವಿದ್ಯಾರ್ಥಿಗಳಿಗೆ ಸರಿಯಾದ ಬೋಧನೆ ಕ್ರಮವಿಲ್ಲದಿರುವುದು ಮೊದಲೇ ಅವನ ಗಮನ ಸೆಳೆದಿತ್ತು. ಅದನ್ನುಸುಧಾರಿಸುವತ್ತ ತನ್ನ ಮೊದಲ ಗಮನ ಹರಿಸಿದ. ಸುಮಾರು 180 ವಿದ್ಯಾರ್ಥಿಗಳಿರುತ್ತಿದ್ದ ತರಗತಿಯಲ್ಲಿ ಅವರಿಗೆಲ್ಲಾ ಕುಳಿತುಕೊಂಡು ಪಾಠ ಕಲಿಯುವ ಅನುಕೂಲತೆಗಳಿರಲಿಲ್ಲ. ಕೆಲವುಟ್ಟಿಗೆ ತನ್ನ ಖರ್ಚಿನಿಂದಲೇ ಕೆಲವು ಮಾರ್ಪಾಡುಗಳನ್ನು ಮಾಡಿದ. ಇದರಿಂದ ಮೊದಲು ವಿದ್ಯಾರ್ಥಿಗಳ ಪ್ರೀತ್ಯಾದರಗಳನ್ನು ಗಳಿಸಿಕೊಂಡ ಪ್ರತಿ ವಿಷಯದ ಬೋಧನೆಗೆ ಮೊದಲು ಆಳವಾದ ಅಭ್ಯಾಸ ಮಾಡಿಕೊಂಡು, ಟಿಪ್ಪಣಿಗಳನ್ನು ತಯಾರಿಸಿಕೊಂಡಿರುತ್ತಿದ್ದ. ಎಂದೋ ಪ್ರಕಟಿಸಿದ ಹಳೆಯ ಪಠ್ಯಪುಸ್ತಕಗಳನ್ನೇ ನೆಚ್ಚಿಕೊಳ್ಳದೆ ತನ್ನ ಅನುಭವಕ್ಕೆ ಬರುತ್ತಿದ್ದ ಹೊಸ ಹೊಸ ವಿಷಯಗಳ ವ್ಯಾಖ್ಯಾನಗಳನ್ನು ಮಾಡುತ್ತಿದ್ದರಿಂದ ವಿದ್ಯಾರ್ಥಿಗಳಿಗೆ, ಇತರರ ಬೋಧನೆಗಳಿಗಿಂತ ಹೆಚ್ಚು ಆಕರ್ಷಕವಾಗಿರುತ್ತಿದ್ದವು. ಅವನು ಭಾಷಣ ಮಾಡುತ್ತಿದ್ದಾಗ ಕೊಠಡಿ ತುಂಬಿ ತುಳುಕುತ್ತಿತ್ತಂತೆ. ಮೊದಲ ವರ್ಷದ ಪಾಠ ಪ್ರವಚನಗಳು ಮುಗಿಯುತ್ತಿದ್ದಂತೆಯೇ ವಿದ್ಯಾರ್ಥಿಗಳೆಲ್ಲಾ ಸೇರಿ ಲಿಸ್ಟರ್‌ನನ್ನು ಸನ್ಮಾನಿಸಿ, ಮಾನಪತ್ರವನ್ನರ್ಪಿಸಿದರಂತೆ.

ಸಂಶೋಧನೆಗಳಲ್ಲಿ ತೊಡಗಿಸಿಕೊಳ್ಳುವುದು ಜೋಸೆಫ್ ಲಿಸ್ಟರ್ ಎಳೆಯ ವಯಸ್ಸಿನಿಂದ ರೂಢಿಸಿಕೊಂಡ ಹವ್ಯಾಸ. ಆಸ್ಪತ್ರೆಯ ಕೆಲಸವಿಲ್ಲದ ಈ ಸಮಯದಲ್ಲಿ ಹಲವು ಬಗೆಯ ಉಪಕರಣಗಳ ಆವಿಷ್ಕಾರವಾಯಿತು. ಗಾಯಗಳನ್ನು

ಜೋಡಿಸಿ ಹೊಲಿಗೆ ಹಾಕಲು ತುಕ್ಕುಹಿಡಿಯುತ್ತಿದ್ದ ಸೂಜಿಗಳ ಬದಲಿಗೆ ಬೆಳ್ಳಿ ಲೋಹದಿಂದ ಮಾಡಿದ ಸೂಜಿಗಳನ್ನು ಜಾರಿಗೆ ತಂದನು. ಉದರಕೋಶದ ಹಿಂದಿನ ಭಿತ್ತಿಗೆ ಹೊಂದಿಕೊಂಡಿರುವ ಅಯೋರ್ಟಾ ಎಂಬ ರಕ್ತನಾಳದ ಒಂದು ಭಾಗ ವಿಕಸಿಸಿ ಊದಿಕೊಂಡು ಪರಿಸ್ಥಿತಿ (ANEURYSM) ಯನ್ನು ಸಂಕುಚನಗೊಳಿಸಲು ಹೊಟ್ಟೆಯನ್ನು ಅದುಮಿ ಹಿಡಿಯಲು "ತಿರುಚೊತ್ತು" (TOURNIQUET) ನ್ನು ಈ ಸಮಯದಲ್ಲೇ ಲಿಸ್ಟರ್ ತಯಾರಿಸಿದ. ಕಿವಿ, ಮೂಗುಗಳ ರಂಧ್ರಗಳಲ್ಲಿ ಸೇರಬಹುದಾದ ಬೀಜ, ಮಣಿಗಳಂತಹ ಹೊರಗಿನ ವಸ್ತುಗಳನ್ನ ಹೊರತೆಗೆಯಲು – ಒಂದು ವಿಶಿಷ್ಟ ರೀತಿಯ ಇಕ್ಕಳವನ್ನು ತಯಾರಿಸಿದ; ಎಲ್ಲಕ್ಕಿಂತ ಮಿಗಿಲಾಗಿ ದೇಹದ ಇಕ್ಕಟ್ಟಾದ ವಲಯಗಳಲ್ಲಿ ಶೇಖರಣೆಯಾಗಿರಬಹುದಾದ ಕೀವು ಇರುವ ಜಾಗಕ್ಕೆ ನಸುಳುವಂತೆ ಮಾಡಿ ಕೀವನ್ನು ಹೊರತೆಗೆಯಲು ಉದ್ದನೆಯ ಇಕ್ಕಳದ ರೀತಿಯ ಉಪಕರಣವನ್ನ ಆವಿಷ್ಕರಿಸಿದ. ಅದೀಗ ವಿವಿದೋದ್ದೇಶಗಳಿಗೆ ಉಪಯೋಗಿಸಲ್ಪಡುತ್ತಿದ್ದು. ಲಿಸ್ಟರ್‌ನ ಸೈನಸ್ ಫಾರ್ಸೆಪ್ಸ್ (LISTER'S SINUS FORCEPS) ಎಂದೇ ಪ್ರಖ್ಯಾತಿ ಪಡೆದಿದೆ. ಆ ಕಾಲದಲ್ಲೇ ಶಸ್ತ್ರ ಚಿಕಿತ್ಸೆಗಾಗಿ ಅವನು ತಯಾರು ಮಾಡಿದ ಕತ್ತರಿಯ ಮಾದರಿಯೊಂದು ಇಂದಿಗೂ ಬಳಕೆಯಲ್ಲಿದೆ.

ಸಂಶೋಧನೆ ಮತ್ತು ಬೋಧನಾ ವಿಷಯಗಳಲ್ಲಿ ಇರುವಷ್ಟು ಆಸಕ್ತಿ ಬರವಣಿಗೆಗಳ ವಿಷಯದಲ್ಲಿ ಲಿಸ್ಟರ್‌ಗೆ ಇರಲಿಲ್ಲವೆಂದೇ ಹೇಳಬಹುದು. ಆದರೂ ಆ ಸಮಯದಲ್ಲಿ (1860-64) ಲಂಡನ್‌ನ ತಿಮೋತಿ ಹೋಮ್ಸ್ ಎಂಬುವವರ ಸಂಪಾದಕತ್ವದಲ್ಲಿ ಪ್ರಕಟವಾದ ನಾಲ್ಕು ಸಂಪುಟಗಳ ಮಹದ್ಗ್ರಂಥದಲ್ಲಿ ಅರಿವಳಿಕೆ ಹಾಗೂ ಅಂಗಚ್ಛೇದನ ವಿಷಯಗಳನ್ನುಕುರಿತು ಬರೆಯಲು ಲಿಸ್ಟರ್ ಆಹ್ವಾನಿತನಾಗಿದ್ದ. ಲಂಡನ್ ವಲಯದಿಂದ ಹೊರಗಿನ ಪ್ರದೇಶಗಳಲ್ಲಿ ಲಿಸ್ಟರ್ ಒಬ್ಬನಿಗೆ ಅಂತಹ ಗೌರವ ಸಂದಿದ್ದು; ಜೋಸೆಫ್ ಲಿಸ್ಟರ್ ತನ್ನ ವೃತ್ತಿಯ ಆರಂಭದ ಹಂತದಲ್ಲೇ ಗಳಿಸಿಕೊಂಡಿದ್ದ ಅನುಭವ; ಖ್ಯಾತಿಗಳ ಪ್ರತೀಕ ಅದಾಗಿತ್ತೆನ್ನ ಬಹುದು.

ಲಿಸ್ಟರ್ ವಿಧ್ಯುಕ್ತವಾಗಿ ಗ್ಲಾಸ್ಗೋ ಆಸ್ಪತ್ರೆಯಲ್ಲಿ ಕೆಲಸ ಮಾಡಲು ನೇಮಕವಾದ ಕೂಡಲೇ ಅತ್ಯಂತ ಶ್ರದ್ಧೆಯಿಂದ ಕಾರ್ಯಾರಂಭ ಮಾಡಿದ. ದಿನ ನಿತ್ಯದ ಶಸ್ತ್ರ ಚಿಕಿತ್ಸೆಗಳನ್ನು ಜರುಗಿಸುವುದರ ಜೊತೆಗೆ ಹೊಸ ಹೊಸ ವಿಧಾನಗಳನ್ನು ರೂಪಿಸುವುದು ಅವನ ಜಾಯಮಾನವೇ ಆಗಿತ್ತು. ಮಣಿಕಟ್ಟಿನ

ಮೂಳೆಗಳಿಗೆ ಕ್ಷಯರೋಗ ತಗುಲಿದಾಗ ಮಣಿಕಟ್ಟನ್ನೇ ಅಂಗಚ್ಛೇದನ ಮಾಡಿ ತೆಗೆದುಹಾಕುವುದು ಆ ಕಾಲದಲ್ಲಿ ಚಿಕಿತ್ಸಾ ವಿಧಾನವಾಗಿತ್ತು. ಮಾನವ ಜನಾಂಗದವರ ಜೀವನ ಸಾಧನೆಗಳಿಗೆ ಮಣಿಕಟ್ಟು ವಹಿಸಬಹುದಾದ ಪಾತ್ರ ಯಾರಿಗೆ ತಾನೇ ಅರಿವಿಲ್ಲ. ಕ್ಷಯರೋಗಕ್ಕೆ ಪರಿಣಾಮಕಾರಿ ಚಿಕಿತ್ಸಾ ವಿಧಾನಗಳಿಲ್ಲದ ಆ ಸಮಯದಲ್ಲಿ ಬೇರೆ ಉಪಾಯವಿರಲಿಲ್ಲ. ಆದರೆ ಲಿಸ್ಟರ್‌ಗೆ ಈ ವಿಷಯದಲ್ಲಿ ಸಮ್ಮತಿ ಇರಲಿಲ್ಲ. ಆದುದರಿಂದ ಈ ಬಗೆಗೆ ದೀರ್ಘ ಚಿಂತನೆ ಮಾಡಿ ಮಣಿಕಟ್ಟಿನಲ್ಲಿ ರೋಗಕ್ಕೆ ಗುರಿಯಾಗುವ ಅಸ್ಥಿಯನ್ನು ಪ್ರತ್ಯೇಕವಾಗಿ ತೆಗೆದುಹಾಕುವ ವಿಧಾನವೊಂದನ್ನು ಜಾರಿಗೆ ತಂದನು. ಆದ್ದರಿಂದ ಕೈ ಮತ್ತು ಹಸ್ತದ ಉಪಯುಕ್ತತೆಗೆ ಕುಂದುಂಟಾಗುತ್ತಿರಲಿಲ್ಲ. ಈ ವಿಧಾನವನ್ನು ವಿವರಿಸಿ ವೈದ್ಯಕೀಯ ಪತ್ರಿಕೆಗಳಲ್ಲಿ ಲೇಖನಗಳನ್ನು ಪ್ರಕಟಿಸಿದ. ಮುಂದೆ ಹಲವು ಶಸ್ತ್ರವೈದ್ಯರು ಈ ವಿಧಾನವನ್ನನುಸರಿಸಿ ಒಳ್ಳೆಯ ಫಲಿತಾಂಶಗಳನ್ನು ಪಡೆದ ವರದಿಗಳಾಗುತ್ತಿದ್ದವು. ಲಿಸ್ಟರ್ ರೂಪಿಸಿದ ವಿಧಾನ ಅದೆಷ್ಟು ಯಶಸ್ವಿಯಾಗಿತ್ತೆನ್ನುವುದರ ಬಗೆಗೆ ಒಂದು ನಿದರ್ಶನವನ್ನು ಇಲ್ಲಿ ಉಲ್ಲೇಖಿಸಬಹುದು. ಲಿಸ್ಟರ್ ಗತಿಸಿದ ಹಲವು ವರ್ಷಗಳಾದ ಮೇಲೆ ಗ್ಲಾಸ್ಗೋ ನಗರದ ಕೆಲ್ವಿನ್ ಗ್ರೋವ್ ಉದ್ಯಾನವನದಲ್ಲಿ ಅವನ ಪ್ರತಿಮೆಯ ಅನಾವರಣ ಜರುಗಿತು. ಲಿಸ್ಟರ್‌ನ ಶಿಷ್ಯರಲ್ಲೊಬ್ಬರಾದ ರ್ ಸರ್ ಹೆಕ್ಟರ್ ಕ್ಯಾಮರೂನ್ ಅದನ್ನು ಅನಾವರಣಗೊಳಿಸುತ್ತಿದ್ದರು. ಅದೇ ಸಮಯದಲ್ಲಿ ಸೇರಿದ್ದ ಜನ ಸಮುದಾಯದಿಂದ ಸುಮಾರು ಎಪ್ಪತ್ತು ವರ್ಷದ ಹಣ್ಣು ಹಣ್ಣು ಮುದುಕಿ ಪುಷ್ಪ ಗುಚ್ಛವನ್ನು ಹಿಡಿದುಕೊಂಡು ಪ್ರತಿಮೆಯ ಪಾದಗಳಿಗರ್ಪಿಸಿ ಗೌರವ ಸೂಚಕವಾಗಿ ತಲೆ ಬಾಗಿಸಿ ನಿಂತಳು. ಮತ್ತೆ ಸ್ವಲ್ಪ ಸಮಯದಲ್ಲೇ ತನ್ನ ಎಡಗೈಯನ್ನು ಮೇಲೆ ಎತ್ತಿ ಹಿಡಿದು, ಆಕೆ ಹನ್ನೆರಡು ವರ್ಷದವಳಾಗಿದ್ದಾಗ ಲಿಸ್ಟರ್ ಶಸ್ತ್ರಚಿಕಿತ್ಸೆ ಮಾಡಿ ಉಳಿಸಿರುವುದನ್ನ ಪ್ರದರ್ಶಿಸಿ ತನ್ನ ಸಂತೋಷವನ್ನು ವ್ಯಕ್ತಪಡಿಸಿದಳು!

ಜೋಸೆಫ್ ಲಿಸ್ಟರ್ ಗ್ಲಾಸ್ಗೋ ಆಸ್ಪತ್ರೆಯಲ್ಲಿ ಜಾರಿಗೆ ತಂದ ಇನ್ನೊಂದು ವಿಧಾನವೆಂದರೆ ಕ್ಲೋರೋಫಾರಂ ಅನ್ನು ವ್ಯಾಪಕವಾಗಿ ಬಳಸಲು ಶುರು ಮಾಡಿದ್ದು. ಹತ್ತೊಂಬತ್ತನೆಯ ಶತಮಾನದಲ್ಲಿ ಅಮೆರಿಕಾದಲ್ಲಿ ಶಸ್ತ್ರ ಚಿಕಿತ್ಸಾ ಸಮಯದಲ್ಲಿ ನೋವಿನ ನಿವಾರಣೆಗಾಗಿ ಈಥರ್ ಎಂಬ ಅನಿಲದ ಬಳಕೆ ಆರಂಭವಾಯಿತು. ಲಿಸ್ಟರ್ ತರಬೇತಿ ಪಡೆಯುತ್ತಿದ್ದ ಎಡಿನ್‌ಬರೋ ಆಸ್ಪತ್ರೆಯಲ್ಲಿ ಖ್ಯಾತ ವೈದ್ಯರಾದ ರಾಬರ್ಟ ಲಿಸ್ಟನ್ ಎಂಬುವವರು ಸೈಮ್‌ರ ರೋಗಿಯೊಬ್ಬನ

ಮೇಲೆ ಪ್ರಯೋಗ ಮಾಡಿದ್ದರು (1846, ಡಿಸೆಂಬರ್). ಜೋಸೆಫ್ ಲಿಸ್ಟರ್ ಆ ಸಮಯದಲ್ಲಿ ಹಾಜರಿದ್ದ. ನಂತರ ಕೆಲವರಿಗೆ ಸೈಮ್‌ರೇ ಪ್ರಯೋಗಿಸಿದ್ದರೂ, ಅದು ಹೇಗೋ ಅವರ ಮತ್ತು ಇಂಗ್ಲೆಂಡಿನ ಹಲವು ವೈದ್ಯರ ಕೈಯಲ್ಲಿ ಈಥರ್ ಬಳಕೆಯಿಂದ ಉತ್ತಮ ಪರಿಣಾಮಗಳು ಲಭಿಸಿರಲಿಲ್ಲ. ನಂತರದ ಕೆಲವೇ ತಿಂಗಳುಗಳಲ್ಲಿ ಖ್ಯಾತ ಪ್ರಸೂತಿ ಶಾಸ್ತ್ರಜ್ಞ ಜೇಮ್ಸ್ ಸಿಂಪ್ಸನ್ ಕ್ಲೋರೋಫಾರಂ ಎಂಬ ಅನಿಲವನ್ನು ಪ್ರಯೋಗಿಸಿ ಒಳ್ಳೆಯ ಫಲಿತಾಂಶ ಪಡೆಯಲಾರಂಭಿಸಿದರು. ಮುಂದೆ, ಅದು ಎಡಿನ್‌ಬರೋ ಆಸ್ಪತ್ರೆಯಲ್ಲೂ ಬಳಕೆಗೆ ಬಂದಿತು. ಸ್ವತಃ ಸೈಮ್‌ರೇ ಸಾವಿರಾರು ಪ್ರಕರಣಗಳಲ್ಲಿ ಕ್ಲೋರೋಫಾರಂ ಅನ್ನು ಬಳಸಿ ಅದರಲ್ಲಿ ನೈಪುಣ್ಯತೆ ಪಡೆದಿದ್ದರು. ಲಿಸ್ಟರ್ ಅಂತಹ ಸಮಯಗಳಲ್ಲಿ ಖುದ್ದಾಗಿ ಭಾಗವಹಿಸುವ ಅವಕಾಶವಿರುತ್ತಿದ್ದುದರಿಂದ, ಅವರಿವಳಿಕೆ ನೀಡುವ ಕಾರ್ಯದಲ್ಲಿ ಪರಿಣತಿಯನ್ನು ಪಡೆದುಕೊಂಡಿದ್ದನೆಂದೇ ಹೇಳಬಹುದು. ಲಿಸ್ಟರ್ ಗ್ಲಾಸ್ಗೋಗೆ ಬಂದ ಮೇಲೆ ಅರಿವಳಿಕೆಗಾಗಿ ಕ್ಲೋರೋಫಾರಂ ನೀಡುವುದು ಖಾಯಂ ಆಯಿತು. ಇದರಿಂದ ಅಲ್ಲಿ ಜರುಗುತ್ತಿದ್ದ ಶಸ್ತ್ರ ಚಿಕಿತ್ಸೆಗಳ ಪ್ರಮಾಣವೂ ಹೆಚ್ಚಾಗಿದ್ದರಲ್ಲಿ ಆಶ್ಚರ್ಯವೇನಿಲ್ಲ. ಅದರ ಫಲಶ್ರುತಿಯೆಂದರೆ, ಹೆಚ್ಚು ಹೆಚ್ಚು ಗಾಯಗಳಲ್ಲಿ ನಂಜಾಗಿ ಕೀವಾಗುವುದೂ ಸಹ ಸಮಸ್ಯೆಯಾಗತೊಡಗಿತು. ಅಲ್ಲಿಯ ವಾರ್ಡುಗಳು ದುರ್ಗಂಧಮಯವಾಗಿ ನರಕದ ಕೂಪಗಳಾದವು.

# ೫. ಶಸ್ತ್ರ ವೈದ್ಯ ವೃತ್ತಿಯ ಹಿನ್ನೆಲೆ

ಹಿಂದಿನ ಅಧ್ಯಾಯದಲ್ಲಿ ಗಾಯಗಳಲ್ಲಿ ಕೀವು ಉತ್ಪಾದನೆಯಾಗಿ ರೋಗಿಗೆ ನಂಜೇರುವ ವಿಷಯಗಳನ್ನು ಪ್ರಸ್ತಾಪಿಸಲಾಯಿತಷ್ಟೆ, ಪ್ರಸ್ತುತ ಸಮಯದಲ್ಲಿ ಶಸ್ತ್ರಚಿಕಿತ್ಸೆಯ ಗಾಯಗಳು ಸಾಮಾನ್ಯವಾಗಿ ಅಂತಹ ಯಾವ ತೊಡಕುಗಳು ಇಲ್ಲದೇ ವಾಸಿಯಾಗುವುದನ್ನು ನೋಡುವ ಅವಕಾಶವಿದ್ದವರಿಗೆ ಆಗಿನ ಪರಿಸ್ಥಿತಿಯನ್ನು ಊಹಿಸುವುದಕ್ಕೂ ಆಗಲಾರದು. ಲಿಸ್ಟರ್‌ನ ಕಾಲ ಮತ್ತು ಅದಕ್ಕೂ ಮೊದಲಿನ ಸಾವಿರಾರು ವರ್ಷಗಳಲ್ಲಿ ಗಾಯಗಳಲ್ಲಿ ನಂಜಾಗುವ ಸಮಸ್ಯೆ ಮನುಕುಲವನ್ನು ಬಾಧಿಸುತ್ತಲೇ ಇತ್ತು. ವೈದ್ಯಕೀಯ ಕ್ಷೇತ್ರ, ಅದರಲ್ಲೂ ಶಸ್ತ್ರಚಿಕಿತ್ಸೆಗಳ ಯಶಸ್ಸು ಮತ್ತು ಪ್ರಗತಿಗೆ ಇದು ಅತ್ಯಂತ ಮಹತ್ತರದ ತೊಡಕಾಗಿತ್ತು. ಯಾವುದೇ ರೀತಿಯ ತೆರೆದ ಗಾಯ ಒಂದೆರಡು ದಿನಗಳಲ್ಲಿ ಕೆಂಪಡರಿ ಊದಿಕೊಳ್ಳುವುದು ಸರ್ವೇ ಸಾಮಾನ್ಯ ಸಂಗತಿಯಾಗಿ ಬಿಡುತ್ತಿತ್ತು. ಮುಂದಿನ 4-6 ದಿನಗಳಲ್ಲಿ ಅವುಗಳಿಂದ ದುರ್ಗಂಧ ಭರಿತ ಕೀವು ಸುರಿಯಲಾರಂಭಿಸಿ, ರೋಗಿ ವಿಪರೀತ ಜ್ವರದ ಬಾಧೆಯಿಂದ ನರಳುತ್ತಿದ್ದನು. ಕೆಲವರಲ್ಲಿ ಬುದ್ಧಿಭ್ರಮಣೆಯಾಗಿ ಹುಚ್ಚು ಹಿಡಿದವರಂತೆ ಕೂಗಾಡುತ್ತಿದ್ದರು. 'ನಂಜಿನ ಜ್ವರ' (SEPTICAEMIA) ಆ ಕಾಲದಲ್ಲಿ ತುಂಬಾ ಪ್ರಚಾರದಲ್ಲಿದ್ದ ಕುಖ್ಯಾತ ವ್ಯಾಧಿಯಾಗಿತ್ತು. ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಂಡ ಬಾಣಂತಿಯರಲ್ಲೂ ಈ ವ್ಯಾಧಿಯಿಂದ ಬಹುಪಾಲು ಸಾಯುತ್ತಿದ್ದರು. ಅದರಲ್ಲೂ ವೈದ್ಯ ವಿದ್ಯಾರ್ಥಿಗಳಿಗೆ ತರಬೇತಿ ನೀಡುವ ಹೆರಿಗೆ ಆಸ್ಪತ್ರೆಗಳಲ್ಲಿ ಈ ಸಮಸ್ಯೆ ಬೃಹದಾಕಾರವಾಗಿದ್ದು, ಯೂರೋಪಿನ ಕೆಲವು ಹೆಸರಾಂತ ಹೆರಿಗೆ ಆಸ್ಪತ್ರೆಗಳಲ್ಲಿ ಹೆರಿಗೆಯಾದ ಮುಕ್ಕಾಲು ಪಾಲು ಸ್ತ್ರೀಯರು, ಇಲ್ಲ ಕೆಲವು ಸಾರಿ ನೂರಕ್ಕೆ ನೂರು ಸ್ತ್ರೀಯರು ಇದರಿಂದ ಸಾಯುತ್ತಿದ್ದರು! ಈ ಸಮಸ್ಯೆಯನ್ನು ಎದುರಿಸಲಾಗದೆ ಕೆಲವು ಹೆರಿಗೆ ಆಸ್ಪತ್ರೆಗಳನ್ನು ಕಡ್ಡಾಯವಾಗಿ ಮುಚ್ಚಿಸಿಬಿಡುತ್ತಿದ್ದರಂತೆ ತರಬೇತಿ ಪಡೆಯುವ ವಿದ್ಯಾರ್ಥಿಗಳು ಸಾಮಾನ್ಯವಾಗಿ ಬೆಳಗಿನ ಹೊತ್ತು ಶವಾಗಾರದಲ್ಲಿ ಶವ ಪರೀಕ್ಷೆ ನಡೆಸಿ ನೇರವಾಗಿ ಹೆರಿಗೆ ಕೊಠಡಿಗಳಿಗೆ ಧಾವಿಸುತ್ತಿದ್ದರು. ಸ್ವಚ್ಛತೆಯ ಬಗ್ಗೆ ಅರಿವಿಲ್ಲದ ಆ ಕಾಲದಲ್ಲಿ ಕೈಗಳನ್ನು ಶುಚಿಮಾಡಿಕೊಳ್ಳದೆ ವೈದ್ಯರು, ವಿದ್ಯಾರ್ಥಿಗಳೆಲ್ಲರೂ ಹೆರಿಗೆ ಮಾಡಿಸುವುದರಲ್ಲಿ ನಿರತರಾಗುತ್ತಿದ್ದರು. ಹಾಗೆ ಹೆರಿಗೆ ಮಾಡಿಸಿಕೊಂಡ ಬಹುಪಾಲು ಜನರು ನಂಜಿನ ಜ್ವರದ ಹಾಗೆಯೇ

'ಬಾಣಂತಿ ಜ್ವರ' ದಿಂದ ನರಳಿ ಸಾಯುವುದು ಆ ಕಾಲದಲ್ಲಿ ತೀರಾ ಸಾಮಾನ್ಯವಾದ ಪರಿಸ್ಥಿತಿಯಾಗಿತ್ತು. ಹೆಸರಾಂತ ವಿಯೆನ್ನಾ ಆಸ್ಪತ್ರೆಯಲ್ಲಿ ಸಹಾಯಕ ವೈದ್ಯನಾಗಿ ಕಾರ್ಯನಿರತನಾಗಿದ್ದ ಹಂಗೇರಿಯ ಇಗನಾಜ್ ಸೆಮೆಲ್‌ವೈಸ್ (1818-1867) ಬಾಣಂತಿಯರು ಹೀಗೆ ಅಕಾಲ ಮರಣಕ್ಕೊಳಗಾಗುತ್ತಿದ್ದುದಕ್ಕೆ ಪಶ್ಚಾತ್ತಾಪ ಪಟ್ಟು ಸಂಶೋಧನೆಗಳನ್ನು ಕೈಗೊಂಡನು. ಅದೇ ಹೆರಿಗೆ ಆಸ್ಪತ್ರೆಯಲ್ಲಿ ತರಬೇತಿ ಪಡೆಯುತ್ತಿದ್ದ ದಾದಿಯರು ಹೆರಿಗೆ ಮಾಡಿಸುತ್ತಿದ್ದ ವಿಭಾಗದಲ್ಲಿ ಬಾಣಂತಿ ಜ್ವರದ ಪ್ರಕರಣಗಳು ಅಷ್ಟಾಗಿರದಿದ್ದುದು ಅವನ ತೀವ್ರ ಗಮನ ಸೆಳೆಯಿತು. ದಾದಿಯರು ನೇರವಾಗಿ ತಮ್ಮ ಕೊಠಡಿಗಳಿಂದ ಆಸ್ಪತ್ರೆಗೆ ಬಂದು ಕಾರ್ಯನಿರತರಾಗಿರುತ್ತಿದ್ದರು. ಅವರು ಶವ ಪರೀಕ್ಷೆಯಂತಹ ಗಲೀಜು ಕೆಲಸದಲ್ಲಿ ತೊಡಗಿಕೊಳ್ಳುವ ಪ್ರಮೇಯವಿರಲಿಲ್ಲ. ಆದುದರಿಂದ ಶವ ಪರೀಕ್ಷೆ ಮಾಡುತ್ತಿದ್ದವರ ಕೈಗೆ ಅಂಟಿಕೊಳ್ಳುತ್ತಿದ್ದ ವಾಸನಾಭರಿತ ದ್ರವದಲ್ಲಿ ಬಾಣಂತಿಯರಲ್ಲಿ ನಂಜುಂಟುಮಾಡುವ ಯಾವುದೋ ಪದಾರ್ಥವಿರಬೇಕೆಂಬ ಸಂಶಯ ಅವನಲ್ಲುಂಟಾಯಿತು. ಅದನ್ನು ಹೋಗಲಾಡಿಸಲು ಸೆಮೆಲ್‌ವೈಸ್ ಶವಾಗಾರದಿಂದ ಹೆರಿಗೆ ಆಸ್ಪತ್ರೆಗೆ ಬಂದು ಹೆರಿಗೆ ಮಾಡಿಸುವ ಮೊದಲು ತಮ್ಮ ಕೈಗಳನ್ನು ಬಿಸಿ ನೀರು ಮತ್ತು ಸಾಬೂನಿನಿಂದ ತೊಳೆದು ಶುಚಿ ಮಾಡಿಕೊಳ್ಳುವುದಲ್ಲದೆ, ಕೈಗಳನ್ನು ಕೆಲ ಸಮಯ ಒಂದು ಬಗೆಯ ದ್ರಾವಣದಲ್ಲಿ ಅದ್ದಿ ಇಟ್ಟುಕೊಳ್ಳಬೇಕೆಂಬ ನಿಯಮವನ್ನು ಜಾರಿಗೆ ತಂದನು. ಹೆರಿಗೆ ಆಸ್ಪತ್ರೆಯ ನಿರ್ದೇಶಕರು ಈ ಏರ್ಪಾಡುಗಳಿಗೆಲ್ಲ ತುಂಬಾ ವೆಚ್ಚ ತಗುಲುತ್ತದೆಂದು ವಿರೋಧಿಸಿದರೂ, ಸೆಮೆಲ್‌ವೈಸ್ ಅದನ್ನು ಮುಂದುವರಿಸಿದನು. ಆ ಪದ್ಧತಿಯನ್ನು ಜಾರಿಗೆ ತಂದ 3-4 ತಿಂಗಳಲ್ಲೇ ಅಲ್ಲಿ ಬಾಣಂತಿ ಜ್ವರದಿಂದ ನರಳಿ ಸಾಯುವವರ ಸಂಖ್ಯೆ ಸಂಪೂರ್ಣವಾಗಿ ಇಳಿಮುಖವಾಗಿ, ಮುಂದೆ ಕೆಲ ತಿಂಗಳುಗಳಲ್ಲಿ ಬಾಣಂತಿ ಜ್ವರದ ಪ್ರಕರಣಗಳೇ ಇಲ್ಲದಂತಾಗಿತ್ತು. ಅಂಕಿ ಅಂಶಗಳಿಂದ ಅದನ್ನೆಲ್ಲಾ ಸಾಬೀತು ಮಾಡಿ ತೋರಿಸಿದರೂ ಆಸ್ಪತ್ರೆಯ ನಿರ್ದೇಶಕ ಹಳೇ ಕಂದಾಚಾರದ, ಹಠಮಾರಿಯಾಗಿದ್ದವರಾದುದರಿಂದ ಸೆಮೆಲ್‌ವೈಸ್‌ಗೆ ಪ್ರೋತ್ಸಾಹ ನೀಡಲಿಲ್ಲ. ಬದಲಿಗೆ ಕೆಲಸದ ಕರಾರು ಅವಧಿ ಮುಗಿದ ನಂತರ ಅವನನ್ನು ಅಲ್ಲಿ ಮುಂದುವರಿಸಲಿಲ್ಲ. ಜೀವನ ನಡೆಸಲು ಬೇರೆ ಮಾರ್ಗಗಳಿಲ್ಲದೆ ಸೆಮೆಲ್‌ವೈಸ್ ತನ್ನ ಸ್ವದೇಶಕ್ಕೆ ಹಿಂದಿರುಗಿ ಸ್ವಲ್ಪ ಕಾಲದಲ್ಲೇ ಬುದ್ಧಿ ಭ್ರಮಣೆ ಮತ್ತು ಸನ್ನಿಪಾತದಿಂದ ಸತ್ತುಹೋದನು. ಅವನ ಜೀವಿತ ಕಾಲದಲ್ಲಿ ತನ್ನ ವಿಚಾರಗಳನ್ನು ಪ್ರಚುರಪಡಿಸಲು ಲೇಖನ ಮತ್ತು ಪುಸ್ತಕಗಳನ್ನು ಬರೆದು

ಪ್ರಕಟಿಸಿದರೂ, ಸುದ್ದಿ ಸಮಾಚಾರಗಳು ಈಗಿನಂತೆ ಶೀಘ್ರಗತಿಯಲ್ಲಿ ಹರಡುವ ಅವಕಾಶ ಗಳಿರದಿದ್ದುದ್ದರಿಂದ ಅವನ ತತ್ವಗಳು ವ್ಯಾಪಕವಾಗಿ ಬಳಕೆಗೆ ಬರಲಿಲ್ಲ.

ಜೋಸೆಫ್ ಲಿಸ್ಟರ್‌ನ ಸಂಶೋಧನೆಗಳು ಆರಂಭವಾಗುವುದಕ್ಕೆ ಮೊದಲು ಆಸ್ಪತ್ರೆಗಳ ಪರಿಸ್ಥಿತಿಯ ಬಗೆಗೂ ಸ್ವಲ್ಪ ದೃಷ್ಟಿ ಹಾಯಿಸುವುದು ಪ್ರಸ್ತುತ. ಬಡವರು ಅಥವಾ ನಿರ್ಗತಿಕರು ಕಾಯಿಲೆಗಳಿಂದ ನರಳುತ್ತಿದ್ದಾಗ ಅವರನ್ನು ಒಂದೆಡೆ ಸೇರಿಸಿ, ಲಭ್ಯವಿದ್ದ ಶುಶ್ರೂಷೆ ಮತ್ತು ಆಹಾರ ಒದಗಿಸುವ ಸಲುವಾಗಿ ಆಸ್ಪತ್ರೆಯಂತಹ ವ್ಯವಸ್ಥೆಗಳು ಬಹಳ ಹಿಂದೆ ಜಾರಿಗೆ ಬಂದಿದ್ದವು. ಕರುಣಾಮಯಿಗಳಾದ ರಾಜರು, ಶ್ರೀಮಂತರು ಇಲ್ಲವೆ ಚರ್ಚ್‌ನ ಧರ್ಮಗುರುಗಳು ಅವುಗಳಿಗೆ ನೆರವಾಗುತ್ತಿದ್ದರು. ಕಾಯಿಲೆಗಳುಂಟಾಗುವುದರ ಸರಿಯಾದ ಅರಿವು ಇರದಿದ್ದ ಆ ಕಾಲದಲ್ಲಿ ಮಂತ್ರವಾದಿಗಳೋ, ಪೂಜಾರಿಗಲೋ ಕೆಲವು ಮದ್ದುಗಳನ್ನು ನೀಡಿ, ಇಲ್ಲವೆ ದೆವ್ವ ಭೂತಗಳನ್ನು ಬಿಡಿಸಿ ಕೆಲವನ್ನು ಗುಣಪಡಿಸುತ್ತಿದ್ದಿರಬಹುದು. ಶುಚಿತ್ವದ ಮಹತ್ವ ಗೊತ್ತಿಲ್ಲದ ಆ ಸಮಯದಲ್ಲಿ ಆಸ್ಪತ್ರೆಗಳು ದುರ್ಗಂಧಭರಿತ ಗಾಯಗಳಿಂದ ಕೂಡಿದ, ಇಲ್ಲವೆ ವಾಂತಿ ಬೇಧಿ, ಕ್ಷಯ, ಕುಷ್ಟರೋಗಗಳಂತಹ ಭಯಂಕರ ಸಾಂಕ್ರಾಮಿಕ ರೋಗಗಳಿಂದ ತುಂಬಿ ತುಳುಕಾಡುತ್ತಿದ್ದವು. ವ್ಯವಸ್ಥಿತ ರೀತಿಯಲ್ಲಿ ವೈದ್ಯಕೀಯ ತರಬೇತಿಯನ್ನು ಪಡೆಯದೆ ವೈದ್ಯರೆನಿಸಿಕೊಂಡವರು ಚಿಕಿತ್ಸೆ ನಡೆಸುತ್ತಿದ್ದರು. ಚಾಕು, ಕತ್ತರಿಗಳನ್ನು ಬಳಸುವ ಅಭ್ಯಾಸವಿರುತ್ತಿದ್ದ ಕ್ಷೌರಿಕರೇ ಆಗಿನ ಶಸ್ತ್ರವೈದ್ಯರು, ಮೈಮೇಲೆ ಏಳುತ್ತಿದ್ದ ಕುರು ಬಾವುಗಳನ್ನು ಒಡೆದು ಕೀವನ್ನು ಹೊರಗೆ ಬಿಡುವುದು, ಕೊಳೆತು ಹೋದ ಕೈಕಾಲುಗಳ ಅಂಗಚ್ಛೇದನೆಗಳಂತಹವೇ ಆಗ ಜರುಗುತ್ತಿದ್ದ ಶಸ್ತ್ರಚಿಕಿತ್ಸೆಗಳಾಗಿರುತ್ತಿದ್ದವು. ಸುಮಾರು 1840ರ ದಶಕದವರೆಗೂ ಶಸ್ತ್ರಚಿಕಿತ್ಸೆ ಸಮಯದಲ್ಲಿ ನೋವನ್ನು ನಿವಾರಿಸುವ ಯಾವುದೇ ವ್ಯವಸ್ಥೆಯಿಲ್ಲದೆ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಲು ಮುಂದೆ ಬರುತ್ತಿದ್ದವರು ಅಪರೂಪವಾಗಿದ್ದರು. ಒತ್ತಾಯದಿಂದ ರೋಗಿಯನ್ನು ನಾಲ್ಕಾರು ಜನ ಒತ್ತಿ ಹಿಡಿದುಕೊಂಡು ಕ್ಷಣಾರ್ಧದಲ್ಲಿ ಚಿಕಿತ್ಸೆಮಾಡಿ ಮುಗಿಸಿ ಬಿಡಬೇಕಾಗುತ್ತಿತ್ತು. ನೋವಿನ ತಲ್ಲಣದಿಂದಲೇ ಕೆಲವರು ಸಾಯುತ್ತಿದ್ದರು. ಉಳಿದವರು ನಂಜೇರಿ ಮುಂದೆ ಸ್ವಲ್ಪ ಸಮಯದಲ್ಲಿ ಅಸುನೀಗುತ್ತಿದ್ದರು. ಶಸ್ತ್ರ ವೈದ್ಯರೆನಿಸಿಕೊಂಡವರಾರಿಗೂ ಶುಚಿತ್ವದ ನಿಯಮಗಳ ಅರಿವಿಲ್ಲದೆ ಕೊಳುಕುತನಕ್ಕೆ ಹೆಸರಾಗಿರುತ್ತಿದ್ದರು. ಅವರ ಉಡುಗೆ ತೊಡುಗೆಗಳೆಲ್ಲ ಕೀವು, ರಕ್ತಮಯವಾಗಿ ರುತ್ತಿದ್ದವು. ಅವುಗಳಲ್ಲಿ ಕೊಳಕಾದ ಸೂಜಿ ದಾರಗಳು ನೇತಾಡುತ್ತಿದ್ದು.

ಶಸ್ತ್ರವೈದ್ಯ ಕೊಳಕಾಗಿದ್ದಷ್ಟು ಹೆಚ್ಚು ನಿಷ್ಣಾತನೆಂಬ ನಂಬಿಕೆ ಜನರಲ್ಲಿತ್ತು. ಗಾಯಗಳಲ್ಲಿ ಕೀವಾಗುವುದು ಶುಭ ಸೂಚನೆಯೆಂದೇ ವೈದ್ಯರು ಹೇಳುತ್ತಿದ್ದರು. ಜೋಸೆಫ್ ಲಿಸ್ಟರ್ ವೈದ್ಯವೃತ್ತಿಗೆ ಪದಾರ್ಪಣೆ ಮಾಡುವ ಸಮಯದಲ್ಲಿ ನೋವನ್ನು ನಿವಾರಿಸುವ ಅರಿವಳಿಕಾ ಪದ್ಧತಿಯೇನೋ ನೆಲೆಯೂರಿತ್ತು. ಅದರಿಂದ ಹಿಂದೆಂದೂ ಮಾಡಲಾಗದ ಶಸ್ತ್ರಚಿಕಿತ್ಸೆಗಳು ಜರುಗುತ್ತಿದ್ದವು. ಈ ಕಾರಣದಿಂದಲೇ ಶಸ್ತ್ರಚಿಕಿತ್ಸೆಗೊಳಗಾದವರಲ್ಲಿ ಕೀವಾಗಿ ನಂಜೇರುವ ಸಮಸ್ಯೆಯೂ ಬೃಹದಾಕಾರವಾಗಿ ಬೆಳೆಯಲಾರಂಭಿಸಿತು. ಲಿಸ್ಟರ್‌ನಂತಹ ಉತ್ಸಾಹಿ ತರುಣ ವೈದ್ಯನ ಚಿಂತನೆ ಈ ಪರಿಸ್ಥಿತಿಯ ನಿವಾರಣೆ ಯತ್ತ ಹರಿದದ್ದು ವೈದ್ಯವೃತ್ತಿಯ ಉದ್ಧಾರಕ್ಕೆ ನಾಂದಿ ಹಾಡಿತು. ಅದರಲ್ಲೂ ಶಸ್ತ್ರವೈದ್ಯನ ಮುನ್ನಡೆಗೆ ಬಹಳಷ್ಟು ಸಹಾಯವಾಯಿತು. ಕೊಳಕು ವೃತ್ತಿಯ ಅಂತ್ಯಜರ ಕೈಯಲ್ಲಿದ್ದ ವೃತ್ತಿ ಇಂದು ಅತ್ಯಂತ ಶ್ರೇಷ್ಠ ಮತ್ತು ಗೌರವಾನ್ವಿತ ವೃತ್ತಿಯಾಗಿ ಪರಿಗಣಿಸಲ್ಪಟ್ಟಿದೆ. ಸಮಾಜದಲ್ಲಿ ಸರ್ಜನ್‌ರಿಗಿಂತ ಉತ್ತಮ ಸ್ತರದ ವರಿಲ್ಲವೆಂಬಂತಾಗಿದೆ.

# ೬. ಲಿಸ್ಟರ್ ಮೊದಲಿನ ಕಾಲ

ಇನ್ನು, ಜೋಸೆಫ್ ಲಿಸ್ಟರ್ ವೈದ್ಯಕೀಯ ಪದವಿ ಗಳಿಸುವ ಸಲುವಾಗಿ ಲಂಡನ್ನಿನ ಮೆಡಿಕಲ್ ಸ್ಕೂಲ್‌ನಲ್ಲಿ ಅಭ್ಯಾಸ ನಿರತನಾದ ಕಾಲದಲ್ಲೂ ಆಸ್ಪತ್ರೆಗಳಲ್ಲಿ ಶಸ್ತ್ರ ಚಿಕಿತ್ಸೆಗೊಳಗಾದವರ ಗಾಯಗಳಲ್ಲಿ ನಂಜಾಗುವ ಪರಿಸ್ಥಿತಿಯಲ್ಲಿ ಹೆಚ್ಚಿನ ಸುಧಾರಣೆಗಳೇನು ಆಗಿರಲಿಲ್ಲ. ಆ ಆಸ್ಪತ್ರೆಯಲ್ಲಿ ಕೇವಲ ಒಂದೇ ಒಂದು ಶಸ್ತ್ರ ಚಿಕಿತ್ಸಾ ಕೊಠಡಿ (OPERATION THEATRE) ಇತ್ತು. ವಾರದಲ್ಲಿ ಒಂದು ಶಸ್ತ್ರ ಚಿಕಿತ್ಸೆ. ಜರುಗುತ್ತಿದ್ದರೇ ಅದೇ ಹೆಚ್ಚು. ಕೊಠಡಿಯ ನೆಲದ ಮೇಲೆ ಮರದ ಹೊಟ್ಟನ್ನು ಹರಡಿರುತ್ತಿದ್ದರು. ಶಸ್ತ್ರಚಿಕಿತ್ಸೆಯಾಗುವಾಗ ಅದರ ಮೇಲೆ ಬೀಳುತ್ತಿದ್ದ ರಕ್ತ ಕೀವುಗಳಿಂದ ತೇವಗೊಂಡಿದ್ದು ದುರ್ಗಂಧ ಭರಿತವಾಗಿರುತ್ತಿತ್ತು. ಆಸ್ಪತ್ರೆಯ ವಾರ್ಡುಗಳಲ್ಲಿ ಸಹಾ ಕನಿಷ್ಠ ದರ್ಜೆಯ ಶುಚಿತ್ವವಿರುತ್ತಿರಲಿಲ್ಲ. ಕಾಟಾಚಾರಕ್ಕಾದರೂ ಕೈಗಳನ್ನು ತೊಳೆದುಕೊಳ್ಳುವ, ಹಾಗೂ ಚಿಕಿತ್ಸೆಗೆ ಬಳಸುವ ಉಪಕರಣಗಳು ಹಾಗೂ ಬಟ್ಟೆ ಬರೆಗಳನ್ನು ಶುಚಿಗೊಳಿಸಿಟ್ಟುಕೊಳ್ಳಬೇಕೆಂಬ ಪ್ರಜ್ಞೆ ಯಾರಿಗೂ ಇರಲಿಲ್ಲ. ಪ್ರಸ್ತುತ ವ್ಯಾಪಕವಾಗಿ ಆಚರಣೆಯಲ್ಲಿರುವ ''ಜೀವಿ ಶುದ್ಧೀಕರಣ'' (STERILIZATION) ತತ್ವ ಯಾರಿಗೂ ತಿಳಿದೇ ಇರಲಿಲ್ಲ. ಶಸ್ತ್ರ ವೈದ್ಯರೆನಿಸಿಕೊಂಡವರು ಹೊರಗೆ ತಿರುಗಾಡಲು ಧರಿಸುತ್ತಿದ್ದ ಉಡುಗೆ ತೊಡುಗೆಗಳಿಂದ ಆಪರೇಷನ್ ಕೊಠಡಿಗಳಲ್ಲೂ ಕಾರ್ಯ ನಿರತರಾಗಿರುತ್ತಿದ್ದರು. ರಕ್ತ, ಕೀವುಗಳಿಂದ ದುರ್ಗಂಧಮಯವಾದ ಆ ಉಡುಗೆಗಳನ್ನು ಚಿಕಿತ್ಸೆ ಜರುಗಿಸುವಾಗಲು ಬದಲಾಯಿಸುತ್ತಿರಲಿಲ್ಲ. ಒಂದು ಸಾರಿ ಚಿಕಿತ್ಸೆಗೆ ಬಳಸಿದ ಉಪಕರಣಗಳನ್ನು ತೊಳೆದು ಶುಚಿಗೊಳಿಸುವ ರೂಢಿ ಇರಲಿಲ್ಲ.

ಈ ತರಹದ ಪರಿಸ್ಥಿತಿ ಲಿಸ್ಟರ್ ಗ್ಲಾಸ್ಗೋ ಆಸ್ಪತ್ರೆಯಲ್ಲಿ ಕೆಲಸಕ್ಕೆ ಸೇರಿದಾಗಲೂ ಇತ್ತು. ಎಡಿನ್ ಬರೋ ಆಸ್ಪತ್ರೆಯಲ್ಲಿ ಹೆಚ್ಚಿನ ಬದಲಾವಣೆಗಳಾಗಿರದಿದ್ದರೂ, ಅವನ ಮಾವ ಸೈಮ್ ಮಾತ್ರ ವೈಯಕ್ತಿಕ ಸ್ವಚ್ಛತೆಯ ಬಗೆ ಹೆಚ್ಚಿನ ಗಮನ ಕೊಡುವುದನ್ನು ಲಿಸ್ಟರ್ ಗಮನಿಸಿದ್ದ. ಅದರಿಂದ ಸೈಮ್ ಶಸ್ತ್ರ ಚಿಕಿತ್ಸೆಮಾಡಿದ ಬಹುಪಾಲು ರೋಗಿಗಳಲ್ಲಿ ನಂಜೇರುವ ಪರಿಸ್ಥಿತಿ ಇತರರಿಗಿಂತ ಕಡಿಮೆ ಪ್ರಮಾಣದಲ್ಲಿರುತ್ತಿತ್ತು. ಲಿಸ್ಟರ್ ಗ್ಲಾಸ್ಗೋಗೆ ಬರುವ ಕೆಲವೇ ದಿನಗಳ ಮೊದಲು ಶಸ್ತ್ರಚಿಕಿತ್ಸಾ ರೋಗಿಗಳಿಗಾಗಿಯೇ ಹೊಸದೊಂದು

ಕಟ್ಟಡ ನಿರ್ಮಾಣವಾಗಿತ್ತು. ಹಿಂದೆ ಆ ಸಲುವಾಗಿ ಇದ್ದ ವಾರ್ಡುಗಳಲ್ಲಿ ನಂಜಿನ ಸಮಸ್ಯೆಯನ್ನು ನಿಭಾಯಿಸಲಾರದೆ ಅದನ್ನು ಕೆಡವಿ ಈ ಹೊಸ ಸರ್ಜಿಕಲ್ ಆಸ್ಪತ್ರೆ ನಿರ್ಮಾಣವಾಗಿತ್ತು. ಆದರೆ ಹೊಸ ಸರ್ಜಿಕಲ್ ಆಸ್ಪತ್ರೆಯಲ್ಲೂ ಪರಿಸ್ಥಿತಿ ಬದಲಾಗಿರಲಿಲ್ಲ. ನೋವು, ನರಳಾಟ, ಸನ್ನಿಪಾತ, ಕೀವು, ವಾಸನೆ ಮತ್ತು ಸಾವುಗಳು ರೀತಿನೀತಿಗಳು ಎಂದಿನಂತೆ ಇಲ್ಲಿಯೂ ಮುಂದುವರಿಯುತ್ತಿದ್ದವು. ಈ ಪರಿಸ್ಥಿತಿಗೆ ಕಾರಣಗಳೇನಿರಬಹುದೆಂದು ಆಗ ಯಾರಿಗೂ ತಿಳಿದಿರಲಿಲ್ಲ. ಆದರೆ ಕೆಲವು ಅವಲೋಕನದ ಪರಿಣಾಮಗಳನ್ನು ಅಲ್ಲಗಳೆಯುವಂತಿರಲಿಲ್ಲ. ಆ ಕಾಲದಲ್ಲಿ ಶಸ್ತ್ರ ಚಿಕಿತ್ಸೆಗಳು ರೋಗಿಯ ಮನೆಯಲ್ಲೋ ಅಥವಾ ಬೇರೆ ಯಾವುದೋ ಕೊಠಡಿಗಳಲ್ಲಿ ಜರುಗುವುದು ಅಪರೂಪವೇನಾಗಿರಲಿಲ್ಲ. ಅಂತಹ ಕೆಲವು ಸಂದರ್ಭಗಳಲ್ಲಿ ಗಾಯಗಳಲ್ಲಿ ಕೀವಾಗುವ ಸಮಸ್ಯೆ ಆಸ್ಪತ್ರೆಗಳಲ್ಲಾಗುವಷ್ಟು ತೀವ್ರ ಸ್ವರೂಪದವಾಗಿರುತ್ತಿರಲಿಲ್ಲ; ಪಟ್ಟಣಗಳಿಗಿಂತ ಹಳ್ಳಿಯ ವಾತಾವರಣದಲ್ಲಿ ಜರುಗಿದ ಶಸ್ತ್ರಚಿಕಿತ್ಸೆಗಳಲ್ಲಿ ಅಷ್ಟಾಗಿ ಕೀವಾಗುತ್ತಿರಲಿಲ್ಲ; ಹಳೇ ಕಾಲದ ದೊಡ್ಡ ದೊಡ್ಡ ಆಸ್ಪತ್ರೆಗಳಲ್ಲಿ ಮಾಡುತ್ತಿದ್ದ ಚಿಕಿತ್ಸೆಗೊಳಗಾದವರಲ್ಲಾಗುತ್ತಿದ್ದ ಪರಿಣಾಮಗಳಿಗಿಂತ, ಹೊಸದಾಗಿ ಕಟ್ಟಿಸಿದ ಸಣ್ಣಪುಟ್ಟ ಆಸ್ಪತ್ರೆಗಳಲ್ಲಿ ಕೆಲವು ಕಾಲವಾದರೂ ಒಳ್ಳೆಯ ಪರಿಣಾಮಗಳಾಗುತ್ತಿದ್ದುದನ್ನು ನೋಡಬಹುದಾಗಿತ್ತು. ಈ ತರಹದ ಪರಿಣಾಮಗಳು ಹಲವು ಶಸ್ತ್ರವೈದ್ಯರ ಗಮನ ಸೆಳೆಯದಿರಲಿಲ್ಲ. ಜಾನ್‌ಬೆಲ್ ಎಂಬ ಶಸ್ತ್ರ ವೈದ್ಯರು 1801 ರಷ್ಟು ಹಿಂದೆ ಪ್ರಕಟಿಸಿದ್ದ (PRICIPLES OF SURGERY ಎಂಬ ಪುಸ್ತಕದಲ್ಲಿ ಆಸ್ಪತ್ರೆಗಳಲ್ಲಿ ಕೊಳೆತ ಅಂಗಾಂಗಗಳಿಂದ ನಂಜೇರಿ ಸಾಯುವುದನ್ನು ತಪ್ಪಿಸಲು, ಅವರನ್ನೆಲ್ಲಾ ಆಸ್ಪತ್ರೆಗಳಿಂದ ಆದಷ್ಟು ಜಾಗ್ರತೆ ಹೊರತಂದು ಶಾಲಾ ಕೊಠಡಿಗಳಲ್ಲೋ, ಚರ್ಚುಗಳ ಆವರಣದಲ್ಲೋ ಇರಿಸಿ ಉಪಚರಿಸುವುದು ಒಳ್ಳೆಯದೆಂದು ಬರೆದಿದ್ದರು.

ಲಿಸ್ಟರ್ ಲಂಡನ್ ಆಸ್ಪತ್ರೆಯಲ್ಲಿ ತರಬೇತಿ ಪಡೆಯುತ್ತಿರುವಾಗಲೇ ಇಂತಹ ಪರಿಸ್ಥಿತಿಯನ್ನು ವಿವರಿಸಲು '' ಹಾಸ್ಪಿಟಲಿಸಂ'' (ಆಸ್ಪತ್ರೆ ವ್ಯಾಧಿ, HOSPITALISM ) ಎಂಬ ಹೊಸದೊಂದು ಶಬ್ದವನ್ನೇ ಠಂಕಿಸಿದ್ದರು. ಆಸ್ಪತ್ರೆಗಳ ಕಟ್ಟಡಗಳ ವ್ಯವಸ್ಥೆಯಲ್ಲೇ ಅದು ಬೇರೂರಿರುತ್ತದೆಂದು ಪ್ರತಿಪಾದಿಸಿದ್ದರು. ಅವರ ಪರಿಹಾರಕ್ಕೆ ಹಿಂದಿನ ಆಸ್ಪತ್ರೆಗಳನ್ನು ಕೆಡವಿ ಹೊಸದಾಗಿ ಕಟ್ಟಿಸಬೇಕೆಂಬುದು ಅವರ ಸಲಹೆಯಾಗಿತ್ತು. ಅರಿವಳಿಕೆಯ ಸಲುವಾಗಿ ಕ್ಲೋರೋಫಾರಂ ಅನ್ನು ಆವಿಷ್ಕರಿಸಿ, ಮೊಟ್ಟ ಮೊದಲು ಇಂಗ್ಲೆಂಡಿನಲ್ಲಿ ಜಾರಿಗೆ

ತಂದ ಸರ್ ಜೇಮ್ಸ್‌ಯಂಗ್ ಸಿಂಪ್ಸನ್ (1811-1870) ಮುಂದೆ ಕೆಲ ಕಾಲಾನಂತರವೂ ಇದೇ ವಾದವನ್ನು ಅತ್ಯಂತ ಅಧಿಕಾರಯುತ ವಾಣಿಯಿಂದ ಪ್ರತಿಪಾದಿಸಿದ್ದರು. ಹೆಸರಾಂತ ಪ್ರಸೂತಿ ತಜ್ಞರಾಗಿದ್ದ ಅವರು ವೈದ್ಯಕೀಯ ಕ್ಷೇತ್ರವೇ ಅಲ್ಲದೆ, ರಾಜಕೀಯ ಹಾಗೂ ಸಾಮಾಜಿಕ ವಲಯಗಳಲ್ಲೂ ಹೆಚ್ಚಿನ ಪ್ರಭಾವ ಬೀರಬಲ್ಲವರಾಗಿದ್ದರು. ಅವರ ಈ ವಾದಕ್ಕೂ ಬೆಂಬಲ ನೀಡುತ್ತಿದ್ದವರಿಗೂ ಬರಗಾಲವಿರಲ್ಲಿ. ಲಂಡನ್ ಆಸ್ಪತ್ರೆಯ ಶಸ್ತ್ರ ಚಿಕಿತ್ಸಾ ಮೇಜಿನ ಮೇಲೆ ಮಲಗಿರುವ ರೋಗಿ ವಾಟರ್ಲೂ ರಣರಂಗದಲ್ಲಿ ಸೆಣಸಾಡುತ್ತಿರುವ ಯೋಧನಿಗಿಂತಲೂ ಹೆಚ್ಚಿನ ಅಪಾಯದಲ್ಲಿರುತ್ತಾನೆಂದು ಅವರು ಆಗಿಂದಾಗ್ಗೆ ಹೇಳುತ್ತಿದ್ದರು. ದೊಡ್ಡ ದೊಡ್ಡ ಆಸ್ಪತ್ರೆಗಳಿಗೆ ಬದಲು ಹೆಚ್ಚು ಖರ್ಚು ತಗಲದ ಚಿಕ್ಕ ಪುಟ್ಟ ಗುಡಿಸಲುಗಳನ್ನು ನಿರ್ಮಿಸಿ ಅವುಗಳಲ್ಲಿ ರೋಗಿಗಳನ್ನಿಟ್ಟು ಶುಶ್ರೂಷೆ ಮಾಡಬೇಕೆಂಬುದು ಅವರ ಸಲಹೆಯಾಗಿತ್ತು. ಇಂಗ್ಲೆಂಡಿನ ಕೆಲವು ಕಡೆ ಅಂತಹ ಪ್ರಯೋಗಗಳು ನಡೆದಿದ್ದರೂ, ಆಸ್ಪತ್ರೆಯ ವ್ಯಾಧಿಯಿಂದ ವಿಮುಕ್ತಿ ಪಡೆಯಲಾಗಿರಲಿಲ್ಲ.

ಎಡಿನ್‌ಬರೋ ಆಸ್ಪತ್ರೆಯಲ್ಲಿ ಲಿಸ್ಟರ್ ಕಾರ್ಯನಿರತನಾಗಿದ್ದಾಗಲೂ ಈ ಸಮಸ್ಯೆ ಇತ್ತಾದರೂ, ಈ ಬಗೆಗೆ ಹೆಚ್ಚಿನ ಗಮನ ಕೊಡುವುದು ಸಾಧ್ಯವಾಗಿರಲಿಲ್ಲ. ಎಲ್ಲಾ ವಿಷಯಗಳಲ್ಲೂ ಯಜಮಾನಿಕೆ ಮಾಡುತ್ತಿದ್ದ ಜೇಮ್ಸ್ ಸೈಮ್‌ರ ಆಡಳಿತದ ವಿರುದ್ಧ ಅವನು ಯಾವುದನ್ನೂ ಸ್ವತಂತ್ರವಾಗಿ ನೆರವೇರಿಸುವ ಧೈರ್ಯವಿದ್ದವನಲ್ಲ. ಸೈಮ್‌ನ ಮಗಳನ್ನು ಮದುವೆಯಾಗಿ ಮಾವ ಸೈಮ್‌ನ ಅಂತರಂಗದ ಮೈತ್ರಿಯನ್ನು ಪಡೆದುಕೊಂಡಿದ್ದು, ಅವನಿಗಿಷ್ಟ ಬಂದ ಸುಧಾರಣೆಗಳನ್ನು ಮಾಡುವ ಅವಕಾಶಗಳಿದ್ದವು. ಆದರೆ ಅನಂತರ ಲಿಸ್ಟರ್ ದಂಪತಿಗಳು ಹೆಚ್ಚು ಸಮಯ ಎಡಿನ್‌ಬರೋದಲ್ಲಿ ಉಳಿಯಲಿಲ್ಲ. ಕೆಲವೇ ತಿಂಗಳುಗಳಲ್ಲಿ ಅವರು ಗ್ಲಾಸ್ಗೋಗೆ ಪ್ರಯಾಣ ಬೆಳೆಸುವುದು ಅನಿವಾರ್ಯವಾಯಿತು.

ಎಡಿನ್‌ಬರೋದಿಂದ ಗ್ಲಾಸ್ಗೋ ಆಸ್ಪತ್ರೆಗೆ ಬಂದು ಸ್ವತಂತ್ರವಾಗಿ ಕಾರ್ಯ ನಿರ್ವಹಿಸಲಾರಂಭಿಸಿದಾಗ ಗಾಯಗಳಲ್ಲಿ ನಂಜೇರುವ ಸಮಸ್ಯೆ ಲಿಸ್ಟರ್‌ಗೆ ನೇರವಾಗಿ ಮುಖಾಮುಖಿಯಾಯಿತು. ತನ್ನ ಎಡೆಬಿಡದ ರೋಗಿಗಳ ಆರೈಕೆಯ ಕೆಲಸ ಕಾರ್ಯಗಳ ನಡುವೆ ಲಿಸ್ಟರ್ ಸಂಶೋದನೆಗಳ ಕಡೆಯೂ ಗಮನ ಹರಿಸುತ್ತಲೇ

ಇದ್ದ. ಶಸ್ತ್ರ ಚಿಕಿತ್ಸೆಯ ವಿಧಾನ ಯಶಸ್ವಿಯಾಗಲೂ ಅದಕ್ಕೆ ಸಂಬಂಧಿಸಿದ ವಿಷಯಗಳ ಬಗೆಗೆ ಹೆಚ್ಚಿನ ಮಾಹಿತಿ ಪಡೆದುಕೊಳ್ಳುವ ಪ್ರಯತ್ನ ಮಾಡುತ್ತಲೂ ಇದ್ದ. ಶರೀರ ಕ್ರಿಯಾ ಶಾಸ್ತ್ರ (PHYSIOLOGY) ದ ತತ್ವಗಳು ಔಷಧ ಚಿಕಿತ್ಸೆಗಿಂತಲೂ ಶಸ್ತ್ರಚಿಕಿತ್ಸಾ ವಿಧಾನದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆಂಬುದು ಅವನ ಅಭಿಪ್ರಾಯವಾಗಿತ್ತು. ಜೀವ ಶಾಸ್ತ್ರ (BIOLOGY) ಮತ್ತು ರಸಾಯನ ಶಾಸ್ತ್ರ ( CHEMISTRY) ಗಳಲ್ಲಿನ ವಿಷಯಗಳನ್ನು ತನ್ನ ಶಾಲಾ ದಿನಗಳಲ್ಲಿ ಆಸಕ್ತಿವಹಿಸಿ ಕಲಿತು ಕೊಂಡಿದ್ದರಿಂದ ಲಿಸ್ಟರ್‌ನ ಪ್ರಸ್ತುತ ಚಿಂತನೆಗಳಿಗೆ ಆಗಲೇ ಅಡಿಗಲ್ಲು ಹಾಕಿದಂತಿತ್ತು. ಆದುದರಿಂದ ಅವನೆಂದೂ ಶುಷ್ಕ ತಾಂತ್ರಿಕ ಶಸ್ತ್ರವೈದ್ಯನಂತೆ ಕೆಲಸ ಮಾಡುತ್ತಿದ್ದವನಲ್ಲ. ಶಸ್ತ್ರಚಿಕಿತ್ಸೆ ಅವನಿಗೆ ಕೇವಲ ಕೈ ಕಸುಬಾಗಿರಲಿಲ್ಲ (HANDICRAFT). ಅದು ಶಾಸ್ತ್ರೀಯ ವಿಜ್ಞಾನವೂ ಆಗಿರುವಂತೆ, ಒಂದು ಕಲೆಯೂ ಆಗಿತ್ತೆಂಬುದು ಲಿಸ್ಟರ್‌ನ ಅಭಿಪ್ರಾಯವಾಗಿತ್ತು.

ಸರ್ ಜಾನ್ ಹಂಟರ್ (SIR JOHN HUNTER 1728-1793) ಇಂಗ್ಲೆಂಡ್ ಕಂಡ ಒಬ್ಬ ಪ್ರತಿಭಾವಂತ ಶಸ್ತ್ರವೈದ್ಯ. ಲಿಸ್ಟರ್‌ಗೆ ಅವರಲ್ಲಿ ತುಂಬಾ ಗೌರವ ಭಾವನೆ ಇತ್ತು. ಅವರನ್ನು ಆರಾಧ್ಯ ದೈವವೆಂದೇ ಭಾವಿಸಿದ್ದ. ಗಾಯಗಳು ವಾಸಿಯಾಗುವ ವಿಚಾರದಲ್ಲಿ ಹಂಟರ್, ಅವು ''ಪ್ರಥಮ ಉದ್ದೇಶ'' (FIRST INTENSION) ಅಲ್ಲದೆ ''ದ್ವಿತಿಯ ಉದ್ದೇಶ'' (SECOND IN-TENSION) ವೆನ್ನಬಹುದಾದ ''ಹರಳು ಕಣಗಟ್ಟುವ'' (GRANULATION) ರೀತಿಯಲ್ಲಿ ವಾಸಿಯಾಗಬಹುದೆಂಬ ಅಭಿಪ್ರಾಯ ಹೊಂದಿದ್ದರು. ಇವುಗಳ ಜತೆಜತೆಗೆ ಗಾಯಗಳ ಹೊರವಲಯದಲ್ಲಿ ''ಹೆಕ್ಕಳೆ'' (SCAB) ಉದ್ಭವಿಸಿ, ಅದರಡಿಯಲ್ಲಿ ಗಾಯ ಕೂಡಿಕೊಂಡು ವಾಸಿಯಾಗುವ ಮೂರನೆ ವಿಧಾನವೊಂದನ್ನೂ ಹಂಟರ್ ವಿವರಿಸುತ್ತಿದ್ದರು. ಈ ವಾದದ ಪ್ರಕಾರ ಮೊದಲು ಗಾಯವಾದಾಗ ಆಗುವ ರಕ್ತ ಸ್ರಾವ ಹೆಪ್ಪುಗಟ್ಟಿ ಮುದ್ದೆಯಾಗುತ್ತದೆ . ಮುಂದೆ ಅದು ಒಣಗಿ ಗಾಯವನ್ನು ಹೊರಗಿನಿಂದ ರಕ್ಷಿಸುವ ಹೆಕ್ಕಳೆಯಾಗಿ ಮಾರ್ಪಾಡಾಗುತ್ತದೆ; ಅಲ್ಲದೆ ಕೀವಾಗುವುದನ್ನು ತಡೆಗಟ್ಟುತ್ತದೆಯೆನ್ನುವುದು ಹಂಟರ್‌ನ ವಾದ. ಲಿಸ್ಟರ್ ಈ ವಾದವನ್ನು ಸಂಪೂರ್ಣವಾಗಿ ತಿರಸ್ಕರಿಸಲಿಲ್ಲವಾದರೂ ಬಹಳಷ್ಟು ಸಾರಿ ಅದೇಕೆ ಹೆಕ್ಕಳೆಯ ಅಡಿಭಾಗದಲ್ಲಿ ಕೀವು ಕಾಣಿಸಿಕೊಂಡು ಗಾಯ ಸಹಜ ರೀತಿಯಲ್ಲಿ

ವಾಸಿಯಾಗುವುದಕ್ಕೆ ಅಡಚಣೆಯಾಗುತ್ತದೆಂಬುದು ಅವನನ್ನು ಬಾಧಿಸುತ್ತಿತ್ತು. ಅದಕ್ಕೂ ಲಿಸ್ಟರ್‌ನ ಮನಸ್ಸಿನಲ್ಲಿ ಮತ್ತೊಂದು ಪ್ರತ್ಯುತ್ತರವೂ ಇದ್ದಂತಿತ್ತು. ಗಾಯದಲ್ಲಿ ಶೇಖರಣೆಯಾಗುತ್ತಿದ್ದ ರಕ್ತ ಮತ್ತಿತರ ದ್ರವಗಳು ವಾತಾವರಣದ ಪ್ರಭಾವದಿಂದ ವಿಘಟನೆಗೊಳಗಾಗಿ ಕೊಳೆಯುವುದರಿಂದ ಕೀವು ಉದ್ಭವಿಸುತ್ತದೆಂಬುದು ಅವನ ಅನಿಸಿಕೆ. ಆದರಿಂದ ಗಾಯಗಳಿಗೆ ವಾತಾವರಣದ ಗಾಳಿ ಪ್ರವೇಶಿಸುವುದರಿಂದ ಕೀವು ಉಂಟಾಗಬಹುದೆಂಬ ಅವನ ಮೊದಲ ಅಭಿಪ್ರಾಯಕ್ಕೆ ಬೆಂಬಲ ನೀಡುತ್ತಿತ್ತಾದರೂ, ತೆರೆಯದೆ ಮುಚ್ಚಿಕೊಂಡ ಅಂಗಾಂಶಗಳು ಜಖಂಗೊಂಡಾಗ ಕೀವಾಗುವುದು ಮತ್ತು ಮೈಮೇಲೆ ಯಾವುದೇ ಬಾಹ್ಯ ಕಾರಣಗಳಿಲ್ಲದೆ ಕೀವು ತುಂಬಿದ ಕುರು, ಬಾವುಗಳು ಏಳುತ್ತಿದ್ದುದರ ಕಾರಣ ಲಿಸ್ಟರ್‌ಗೆ ಅವ್ಯಕ್ತವಾಗಿಯೇ ಉಳಿದುಕೊಂಡು ಬಿಟ್ಟಿತು.

# ೭. ಸಮಸ್ಯೆಯ ಮುಖಾಮುಖಿ

ಯುವ ಜೋಸೆಫ್ ಲಿಸ್ಟರ್, ಹಲವಾರು ವಿರೋಧಗಳ ನಡುವೆಯೂ 33ನೆಯ ವಯಸ್ಸಿನಲ್ಲೇ ಶಸ್ತ್ರಚಿಕಿತ್ಸಾ ವಿಭಾಗದ ಪ್ರಾಚಾರ್ಯನಾಗಿ ಕೆಲಸ ಆರಂಭಿಸಿದ್ದ. ಆ ಬಗೆಗೆ ಅಂತರಾಳದಲ್ಲಿ ತೃಪ್ತಿ ಪಟ್ಟುಕೊಳ್ಳುತ್ತಿದ್ದುದೂ ಸಹಜವೆ. ಹೆಸರಾಂತ ಶಸ್ತ್ರ ವೈದ್ಯ ಎಡಿನ್‌ಬರೋದ ಜೇಮ್ಸ್ ಸೈಮ್‌ನ ಮಗಳು ಸೌಂದರ್ಯ ರಾಣಿಯೆನಿಸಿದ ಆಗ್ನೀಸ್‌ಳನ್ನು ಮದುವೆಯಾಗಿ ಸಮಾಜದಲ್ಲೂ ಗಣ್ಯರ ಸಾಲಿಗೆ ಸೇರಿದವನಾಗಿದ್ದ. ಶಸ್ತ್ರ ವೈದ್ಯ ವೃತ್ತಿಯಲ್ಲೂ ಒಳ್ಳೆಯ ಕಸಬುಗಾರನೆಂಬ ಹೆಸರು ಗಳಿಸಿದ್ದ. ಒಳ್ಳೆಯ ಬೋಧಕನಾಗಿಯೂ ವಿದ್ಯಾರ್ಥಿಗಳ ಪ್ರೀತಿ, ಗೌರವಾದರಗಳಿಗೆ ಪಾತ್ರನಾಗಿದ್ದ. ಸಂಶೋಧನಾ ಕ್ಷೇತ್ರದಲ್ಲೂ ಕೈಯಾಡಿಸಿ ಕೆಲವು ಆವಿಷ್ಕಾರಗಳಿಗೆ ಕಾರಣ ಕರ್ತನೂ ಆಗಿದ್ದ. ಜೀವನದಲ್ಲಿ ಸಾಧಿಸಬೇಕಾದ ಹಲವು ಗುರಿಗಳನ್ನು ಸಾಧಿಸಿದ್ದಾಗಿತ್ತು. ಗ್ಲಾಸ್ಗೋಗೆ ಬಂದಾಗಿನಿಂದ ಆಸ್ಪತ್ರೆ ಕೆಲಸ ಮತ್ತು ವಿದ್ಯಾರ್ಥಿಗಳಿಗೆ ಬೋಧನೆಯ ಕೆಲಸಗಳಲ್ಲಿ ಅವಿರತವಾಗಿ ತೊಡಗಿಸಿಕೊಂಡಿದ್ದ. ಆದರೆ ಕೆಲವು ವಿಷಯಗಳಲ್ಲಿ ಅವನಲ್ಲಿ ಅತೃಪ್ತಿಯ ಛಾಯೆ ಮುಸುಕು ಹಾಕಿದಂತಿತ್ತು.

ಎಡಿನ್‌ಬರೋ ಆಸ್ಪತ್ರೆಯಲ್ಲಿನ ಸ್ಥಿತಿಯಂತೆಯೇ ಗ್ಲಾಸ್ಗೋದಲ್ಲೂ ಗಾಯಗಳಲ್ಲಿ ನಂಜಾಗುವುದು, ದುರ್ಗಂಧಮಯ ಕೀವು ಸುರಿಯುವುದು, ರೋಗಿಗಳ ನೋವು ನರಳಾಟ ಮತ್ತುಸಾವು ಲಿಸ್ಟರ್‌ನ ಮನಃಶಾಂತಿಯನ್ನು ಕದಡಿತ್ತು. ಗ್ಲಾಸ್ಗೋ ಆಸ್ಪತ್ರೆಗೆ ಅಲ್ಲಿಯ ಕಾರ್ಖಾನೆಗಳಲ್ಲಾಗುತ್ತಿದ್ದ ಅಪಘಾತಗಳಿಂದ ಕೈಕಾಲು ಮುರಿದುಕೊಂಡವರು ಇತರ ಕಡೆಗಳಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲೇ ಬರುತ್ತಿದ್ದರು. ಅವರಲ್ಲಿ ಕೆಲವರನ್ನು ಬದುಕಿಸುವ ಸಲುವಾಗಿ ಕೈ ಅಥವಾ ಕಾಲಿನ ಅಂಗಚ್ಛೇದನವನ್ನು ತುರ್ತಾಗಿ ಮಾಡಬೇಕಾಗುತ್ತಿತ್ತು. ಹಾಗೆ ಮಾಡಿದರೂ ಗಾಯದಲ್ಲಿ ನಂಜಾಗಿ ಬಹುಪಾಲು ಜನ ಸಾಯುತ್ತಿದ್ದರು. ಲಿಸ್ಟರ್ ತಾನು ಜರುಗಿಸಿದ ಅಂತಹ ಪ್ರಕರಣಗಳ ಅಂಕಿ ಸಂಖ್ಯೆಗಳನ್ನು ತಾಳೆ ನೋಡಿದಾಗ ಶೇಕಡಾ 45 ರಷ್ಟು ಜನ ಸತ್ತಿದ್ದು ಅವನನ್ನು ಚಿಂತಾಕ್ರಾಂತನನ್ನಾಗಿಸಿತು. ಶಸ್ತ್ರವೈದ್ಯ ಇಲಾಖೆಯ ಮುಖ್ಯಸ್ಥನಾಗಿದ್ದುಕೊಂಡು ಈ ದಿಸೆಯಲ್ಲಿ ರೋಗಿಗಳಿಗೆ ಹೆಚ್ಚಿನ ಸಹಾಯ ಮಾಡಲಾಗದುದಕ್ಕೆ ಬೇಸರವಾಗುತ್ತಿತ್ತು. ಇತರ ನಗರಗಳಲ್ಲಿರುವ ಆಸ್ಪತ್ರೆಗಳಲ್ಲಿ ಪರಿಸ್ಥಿತಿ ಇನ್ನೂ ದಾರುಣ ಸ್ಥಿತಿಯಲ್ಲಿರುತ್ತಿದ್ದರೂ, ಸಂಬಂಧಿಸಿದ

ಶಸ್ತ್ರ ವೈದ್ಯರು ಆ ಬಗೆಗೆ ತಲೆ ಕೆಡಿಸಿಕೊಂಡಂತಿರಲಿಲ್ಲ. ಅದೊಂದು ಜೀವನದ ಮಿಕ್ಕೆಲ್ಲಾ ವಿಷಯಗಳಂತೆ ಸಾಮಾನ್ಯ ಘಟನೆಯೆಂದು ಪರಿಗಣಿಸಿ ಅದಕ್ಕೆ. ಹೊಂದಿಕೊಂಡಿದ್ದರು ಲಿಸ್ಟರ್ ಅಂತಹ ಕೆಲವರನ್ನು ಚರ್ಚೆಗೆಳೆದರೆ ಮುಗುಳುನಕ್ಕು ಅವನ ಗಮನವನ್ನು ಬೇರೆ ವಿಷಯಗಳ ಕಡೆ ತಿರುಗಿಸಲು ಪ್ರಯತ್ನಿಸುತ್ತಿದ್ದರು. ಕೀವಾಗುವುದು, ಗಾಯಗಳು ವಾಸಿಯಾಗುವುದರ ಶುಭ ಸೂಚನೆ, ಅದೊಂದು ಪ್ರಕೃತಿ ನಿಯಮವೆಂದು ಹೆಚ್ಚಿನವರು ಆ ಬಗೆಗೆ ಚಿಂತಿಸುವ ಗೋಜಿಗೇ ಹೋಗುತ್ತಿರಲಿಲ್ಲ. ಆದರೆ ಕೆಲವು ಗಾಯಗಳು ಅದು ಹೇಗೆ ಕೀವಾಗದೆ, ನಂಜೇರದೆ ಪ್ರಥಮ ಪ್ರಯತ್ನದಲ್ಲೇ ವಾಸಿಯಾಗುತ್ತವೆಂಬುದರ ಬಗೆಗೆ ಯಾರೂ ವಿವರಣೆ ನೀಡಲಾಗುತ್ತಿರಲಿಲ್ಲ. ಲಿಸ್ಟರ್‌ಗೂ ಅದು ಸೋಜಿಗದ ವಿಷಯವೇ ಆಗಿತ್ತು.

ಈ ಸಂದರ್ಭದಲ್ಲಿ ಲಿಸ್ಟರ್‌ನ ವಾರ್ಡುಗಳಲ್ಲಿರುತ್ತಿದ್ದ ಎರಡು ನಮೂನೆಯ ಗಾಯಗಳು ವಿಭಿನ್ನ ರೀತಿಯಲ್ಲಿ ವಾಸಿಯಾಗುತ್ತಿರುವುದು ಅವನ ತೀವ್ರ ಗಮನ ಸೆಳೆಯುವಂತಾಯಿತು. ಅದೆಂದರೆ ಮೂಳೆ ಮುರಿತದ ಎರಡು ವಿಧಗಳು ವಾಸಿಯಾಗುತ್ತಿದ್ದ ಬಗೆ. ಮೂಳೆ ಮುರಿತದಲ್ಲಿ ಎರಡು ಬಗೆಯವಿರುತ್ತದೆ. ಒಳಗಡೆ ಮೂಳೆ ಮುರಿದಿದ್ದರೂ ಹೊರಗಡೆ ಯಾವುದೇ ಗಾಯವಿರಲಾರದು; ಹಾಗೂ ಮುರಿದ ಮೂಳೆಗಳ ತುದಿಗಳು ಮಾಂಸಖಂಡ, ಚರ್ಮಗಳನ್ನು ಛೇದಿಸಿಕೊಂಡು ಹೊರ ಚಾಚಿರುವುದಿಲ್ಲ. ಅವುಗಳನ್ನು ಸರಳ ಮುರಿತಗಳು (SIMPLE FRACTURES) ಎನ್ನಲಾಗುತ್ತದೆ. ಇನ್ನೊಂದು ವಿಧದಲ್ಲಿ ಮುರಿದ ಮೂಳೆಗಳ ತುದಿಗಳು ಮಾಂಸಖಂಡ, ಚರ್ಮಗಳನ್ನು ಛೇದಿಸಿಕೊಂಡು ಹೊರ ಬಂದಿರುತ್ತವೆ. ಅವುಗಳನ್ನು ಸಂಯುಕ್ತ ಮುರಿತ (COMPOUND FRACTURE) ಗಳೆನ್ನಲಾಗುತ್ತದೆ. ಸರಳ ಮುರಿತಕ್ಕೊಳಗಾದವರಲ್ಲಿ ತುಂಡಾದ ಮೂಳೆಗಳ ತುದಿಗಳನ್ನು ಒಂದಕ್ಕೊಂದು ಸೇರುವಂತೆ ಎಳೆದು ಜೋಡಿಸಿ ಸಾಕಷ್ಟು ಸಮಯ ಅಲುಗಾಡದಂತೆ ಇರಿಸಿದರೆ ಅವು ಯಾವ ತೊಡಕುಗಳೂ ಇಲ್ಲದೆ ಕೂಡಿಕೊಳ್ಳುತ್ತವೆ. ಆದರೆ ಸಂಯುಕ್ತ ಮುರಿತದಲ್ಲಿ ತುಂಡಾದ ಮೂಳೆಗಳನ್ನು ಎಳೆದು ಕೂಡಿಸಿ ಅಲುಗಾಡದಂತೆ ಇರಿಸಿದರೂ ಅವು ತೊಡಕುಗಳಿಲ್ಲದೇ ಕೂಡಿಕೊಳ್ಳುತ್ತವೆಂದು ಹೇಳಲಾಗದು. ಕೆಲವೇ ದಿನಗಳಲ್ಲಿ ಗಾಯದ ಸುತ್ತಲ ಚರ್ಮ ಕೆಂಪಾಗಿ ಊದಿಕೊಳ್ಳುತ್ತದೆ. ಮುಂದಿನ ಕೆಲವು ದಿನಗಳಲ್ಲಿ ಗಾಯದಿಂದ ದುರ್ಗಂಧ ಭರಿತ ಕೀವು ಸುರಿಯಲಾರಂಭಿಸುತ್ತದೆ. ನಂಜಿನ ಜ್ವರ ಏರಿ, ರೋಗಿ

ಹುಚ್ಚನಂತೆ ಬುದ್ಧಿ ಭ್ರಮಣೆ ಹಾಗೂ ಸನ್ನಿಪಾತದಿಂದ ಸಾಯುವುದು ತೀರಾ ಸಾಮಾನ್ಯ ಸಂಗತಿಯಾಗಿತ್ತು. ಅಂಗವಿಚ್ಛೇದನಕ್ಕೊಳಗಾದವರಲ್ಲೂ ಇಂತಹದೇ ಪರಿಸ್ಥಿತಿಯಾಗುತ್ತಿತ್ತೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಈ ವ್ಯತ್ಯಾಸಗಳನ್ನು ಗಮನಿಸಿದ ಲಿಸ್ಟರ್ ತನ್ನ ವಿಚಾರ ಲಹರಿಯನ್ನು ಮತ್ತೆ ಹರಿಯಬಿಟ್ಟ ಮತ್ತು ಆ ವಿಚಾರದ ಬಗ್ಗೆ ಹಗಲು ರಾತ್ರಿ ಯೋಚನಾಮಗ್ನನಾಗಿರುವಂತೆ ಕಂಡುಬರುತ್ತಿದ್ದ. ಪ್ರತಿದಿನ ಅವನ ಸಂಪರ್ಕಕ್ಕೆ ಬರುತ್ತಿದ್ದ ವೈದ್ಯರು, ಶಸ್ತ್ರ ವೈದ್ಯರು ಮತ್ತಿತರ ವಿಜ್ಞಾನಿಗಳ ಹತ್ತಿರ ಈ ವಿಷಯದ ಪ್ರಸ್ತಾಪ ಒಂದಲ್ಲ ಒಂದು ರೀತಿಯಲ್ಲಿ ಲಿಸ್ಟರ್‌ನಿಂದ ಬರುತ್ತಲೇ ಇತ್ತು. ಅದೊಂದು ಗೀಳಾಗಿ ಪರಿಣಮಿಸಿ, ಕೆಲವರು ಆ ಬಗೆಯ ಚರ್ಚೆಯಿಂದ ಅವನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರಂತೆ !

ಗ್ಲಾಸ್ಗೋದ ಹೆಸರಾಂತ ರಸಾಯನ ಶಸ್ತ್ರಜ್ಞರಾದ ಪ್ರೊ. ಥಾಮಸ್ ಅಂಡರ್‌ಸನ್, ಲಿಸ್ಟರ್‌ನ ಆಪ್ತ ಸ್ನೇಹಿತರಾಗಿದ್ದರು. ಅವರಿಬ್ಬರೂ ಸಂಧಿಸಿದಾಗಲೆಲ್ಲಾ ಅವರವರ ಕ್ಷೇತ್ರಗಳಲ್ಲಾಗುತ್ತಿದ್ದ ಹೊಸ ಹೊಸ ಸಂಶೋಧನೆಗಳ ಬಗೆಗ ಚರ್ಚೆಗಳಾಗುತ್ತಿದ್ದವು. ಲಿಸ್ಟರ್ ಒಂದು ಸಲ ಅವನನ್ನು ಸದಾ ಬಾಧಿಸುತ್ತಿದ್ದ ಗಾಯಗಳಲ್ಲಿ ಕೀವಾಗುವ ಸಮಸ್ಯೆಯನ್ನು ಪ್ರಸ್ತಾಪಿಸಿದ. ಮೂಳೆಗಳ ಸರಳ ಮುರಿತ ಮತ್ತು ಸಂಯುಕ್ತ ಮುರಿತಗಳು ಗುಣಮುಖವಾಗುವುದರಲ್ಲಿನ ವ್ಯತ್ಯಾಸಗಳನ್ನು ವಿವರಿಸಿದನು. ಅದನ್ನು ಕೇಳುತ್ತಿದ್ದಂತೆಯ ಅಂಡರ್‌ಸನ್‌ರ ಮನಸ್ಸಿನಲ್ಲಿ ಕೆಲವು ತಿಂಗಳುಗಳ ಹಿಂದೆ ರಸಾಯನ ವಿಜ್ಞಾನದ ಪತ್ರಿಕೆಯಲ್ಲಿ ಓದಿದ ವಿಷಯ ಹಠಾತ್ತಾಗಿ ಜ್ಞಾಪಕಕ್ಕೆ ಬಂದಿತು. ಫ್ರಾನ್ಸ್‌ನ ರಸಾಯನಶಾಸ್ತ್ರ ಪರಿಣಿತ ಲೂಯಿ ಪ್ಯಾಶ್ಚರ್ ಎಂಬುವವರು ಮದ್ಯಸಾರದ ತಯಾರಿಕೆಗೆ ಬಳಸುತ್ತಿದ್ದ ದ್ರಾಕ್ಷಾರಸದಲ್ಲಿ ಹುಳಿಹಿಂಡಿ ಕೊಳೆತು ಹೋಗುವುದು ಮತ್ತು ಅದರಲ್ಲಿ ''ಹುದುಗೆದ್ದು'' (ಹುದುಗೇಳುವಿಕೆ, FERMENTATION) ಮಧ್ಯ ಸಾರ ಉತ್ಪಾದನೆಯಾಗುವ ಸಮಸ್ಯೆಗೆ ಸಂಬಂಧಿಸಿದ ಲೇಖನಗಳು ಜ್ಞಾಪಕಕ್ಕೆ ಬಂದವು. ಲಿಸ್ಟರ್ ವಿವರಿಸಿದ ಹೊರಗಡೆ ಗಾಯವಿಲ್ಲದೆ ಉಂಟಾಗುತ್ತಿದ್ದ ಸರಳ ಮೂಳೆ ಮುರಿತ, ಹಾಗೂ ಹೊರಗಡೆ ತೆರೆದ ಗಾಯದಿಂದ ಮೂಳೆಯ ತುದಿಗಳು ಹೊರಚಾಚಿದ ಸಂಯುಕ್ತ ಮುರಿತಗಳಿಗೂ ಪ್ಯಾಶ್ಚರ್ ಮದ್ಯಸಾರದ ಬಗೆಗೆ ಜರುಗಿಸುತ್ತಿದ್ದ ಪ್ರಯೋಗಗಗಳಿಗೂ ಒಳ್ಳೆಯ ಸಾಮ್ಯತೆ ಇರಬಹುದೆಂಬ ಅಂದಾಜು ಪ್ರೊ। ಅಂಡರ್‌ಸನ್ನರದ್ದು. ಆ ಲೇಖನಗಳನ್ನು ಲಿಸ್ಟರ್ ಅವಶ್ಯಕವಾಗಿ ಓದಲೇಬೇಕೆಂದು ಒತ್ತಾಯಪೂರ್ವಕವಾಗಿ ಸಲಹೆ

ಮಾಡಿದರು. ಲಿಸ್ಟರ್ ಆ ತನಕ ಲ್ಯೂಯಿಪ್ಯಾಶ್ಚರ್‌ನ ಹೆಸರು ಕೇಳಿಯೇ ಇರಲಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಶಸ್ತ್ರವೈದ್ಯನ ಸಮಸ್ಯೆಯೊಂದಕ್ಕೆ ರಸಾಯನ ಶಾಸ್ತ್ರದ ಸಂಶೋಧನೆಯಿಂದ ದೊರೆಯಬಹುದಾದ ಪರಿಹಾರ ಲಿಸ್ಟರ್‌ಗೆ ಸ್ವಲ್ಪ ವಿಚಿತ್ರವೆನಿಸಿತು. ತನ್ನ ಸಮಸ್ಯೆಗೆ ಹೇಗಾದರೂ ಮಾಡಿ ಪರಿಹಾರ ಕಂಡುಕೊಳ್ಳ ಬೇಕೆಂಬ ಉತ್ಕಟ ಆಕಾಂಕ್ಷೆ, ಲಿಸ್ಟರ್ ಆ ಲೇಖನಗಳನ್ನು ಅಭ್ಯಸಿಸಲು ಪ್ರೇರೇಪಿಸಿತು. ಅಂಡರ್‌ಸನ್ ತಮ್ಮಲ್ಲಿದ್ದ ಲೂಯಿಪ್ಯಾಶ್ಚರ್‌ನ ಎಲ್ಲಾ ಲೇಖನಗಳನ್ನೂ ಮರು ದಿನವೇ ಲಿಸ್ಟರ್‌ಗೆ ಕಳುಹಿಸಿಕೊಟ್ಟರು.

ಲೂಯಿ ಪ್ಯಾಶ್ಚರ್‌ನ ಲೇಖನಗಳನ್ನು ಲಿಸ್ಟರ್ ಒಂದೊಂದಾಗಿ ಅಭ್ಯಾಸಮಾಡತೊಡಗಿದ. ಪ್ಯಾಶ್ಚರ್ ಮೊದಲು ಟಾರ್ಟಾರಿಕ್ ಆಮ್ಲದಲ್ಲಾಗುವ ವಿವಿಧ ಬದಲಾವಣೆಗಳನ್ನು ಅಭ್ಯಸಿಸಲು ಜರುಗಿಸಿದ ಪ್ರಯೋಗಗಳನ್ನು ಕುರಿತದ್ದು. ಲಿಸ್ಟರ್‌ಗೆ ಅವು ಅಷ್ಟೇನೂ ಉಪಯುಕ್ತವಾಗಿ ಕಾಣಿಸಲಿಲ್ಲ. ಆದರೆ ದೇಹದಲ್ಲಿನ ವಿವಿಧ ದ್ರವಗಳಲ್ಲಿ ರಾಸಾಯನಿಕ ಪ್ರಕ್ರಿಯೆಗಳು ಜರುಗುವುದರಿಂದಲೂ ಕೆಲವು ವ್ಯಾಧಿಗಳು ಉದ್ಭವಿಸಬಹುದೆಂಬ ನಂಬಿಕೆಯಲ್ಲಿ ಹುರುಳಿರಬಹುದೆಂಬುದು ಈ ಲೇಖನದಿಂದ ಮನದಟ್ಟಾಯಿತು. ಮುಂದಿನದು ಮದ್ಯಸಾರ (ವೈನ್, WINE ) ದ ತಯಾರಿಕೆಗಾಗಿ ತೆಗೆದಿರಿಸಿಕೊಂಡ ದ್ರಾಕ್ಷಾರಸದಲ್ಲಿ ಯಾವುದೋ ಅಗೋಚರ ವಸ್ತು ವಾತಾವರಣದಿಂದ (ಗಾಳಿ) ಬೀಳುವುದರಿಂದ ಅದು ಕೊಳೆತು, ಹಾಳಾಗುತ್ತೆಂಬುದನ್ನು ಪ್ರತಿಪಾದಿಸಿದ ಲೇಖನ. ವಾತಾವರಣ ಅಥವಾ ಗಾಳಿಯಿಂದ ದ್ರಾಕ್ಷಾ ರಸಕ್ಕೆ ಯಾವುದೋ ಅಗೋಚರ ವಸ್ತು ಬೀಳಬಹುದೆಂಬ ಕಲ್ಪನೆಯ ಲಿಸ್ಟರ್‌ನ ಮನಸ್ಸನ್ನು ಕೆರಳಿಸಿತು. ತನಗೂ ಸಮಸ್ಯೆಯಾಗಿರುವ ಸರಳ ಮತ್ತು ಸಂಯುಕ್ತ ಮೂಳೆ ಮುರಿತಗಳ ಸಮಸ್ಯೆಗಳೊಡನೆ ಈ ಕಲ್ಪನೆಗೂ ಸಂಬಂಧವಿರಬಹುದೆಂಬ ಭಾವನೆ ಹಠಾತ್ತಾಗಿ ಹೊಳೆಯಿತು. ಸಂಯುಕ್ತ ಮೂಳೆ ಮುರಿತದ ಗಾಯಗಳೊಳಗೆ ಗಾಳಿ ಪ್ರವೇಶ ಮಾಡುವುದರಿಂದ ದ್ರಾಕ್ಷಾರಸಕ್ಕೆ ಹೊರಗಿನ ವಸ್ತು ಬೀಳುವಂತಹ ಪರಿಸ್ಥಿತಿ ಉಂಟಾಗುತ್ತದೇನೋ ಎಂಬ ಸೂಚನೆ ಲಿಸ್ಟರ್‌ಗೆ ದೊರೆಯಿತು. ಮರುದಿನ ಪ್ರೊ. ಅಂಡರ್‌ಸನ್ ಸಂಧಿಸಿದಾಗ ಈ ವಿಚಾರದ ಬಗೆಗೆ ಅವರಿಬ್ಬರ ನಡುವೆ ವಿಪುಲ ಚರ್ಚೆ ನಡೆಯಿತು. ಅವರೂ ಸಹಾ ಲಿಸ್ಟರ್‌ನ ಅಭಿಪ್ರಾಯಗಳನ್ನು ಬೆಂಬಲಿಸಿದರು. ಈ ವಿಚಾರವನ್ನು ಮುಂದುವರಿಸುವ ಮೊದಲು, ಹಾಗೂ ಲಿಸ್ಟರ್‌ನ ವಿಚಾರಸರಣಿ ಹೇಗೆ ಒಂದು ತಾರ್ಕಿಕ ರೂಪ

ತಾಳುತ್ತದೆಂಬುದನ್ನು ಅರ್ಥೈಸಲು ಲೂಯಿಪ್ಯಾಶ್ಚರ್‌ನ ಪ್ರಯೋಗಗಳನ್ನು ಸ್ವಲ್ಪ ವಿಶದವಾಗಿ ತಿಳಿದುಕೊಳ್ಳ ಬೇಕಾಗುತ್ತದೆ.

ಲೂಯಿಪ್ಯಾಶ್ಚರ್ ವೃತ್ತಿಯಲ್ಲಿ ರಸಾಯನ ಶಾಸ್ತ್ರಜ್ಞ. ಲಿಸ್ಟರ್‌ನಂತೆಯೇ ಎಳೆಯ ವಯಸ್ಸಿನಲ್ಲೇ ಹಲವು ಪ್ರಯೋಗಗಳನ್ನು ಜರುಗಿಸಿ ಹೆಸರು ಗಳಿಸಿದ್ದ. ಮೊಟ್ಟ ಮೊದಲು ಟಾರ್ಟಾರಿಕ್ ಆಮ್ಲದ ಹರಳುಗಳ ಮೂಲಕ ಬೆಳಕನ್ನು ಹಾಯಿಸಿ ಅದರ ಕಿರಣಗಳು ಮಾರ್ಗ ಬದಲಾಯಿಸುವುದನ್ನು ಪ್ರದರ್ಶಿಸಿ, ತನ್ನ 26ನೆಯ ವಯಸ್ಸಿನಲ್ಲೇ ವಿಜ್ಞಾನ ಲೋಕದ ಗಮನ ಸೆಳೆದಿದ್ದ. ಆ ಸಮಯದಲ್ಲೇ ಫ್ರಾನ್ಸಿನ ಪ್ರಮುಖ ಉದ್ಯೋಗಗಳಲ್ಲೊಂದಾದ ಮದ್ಯಸಾರದ ತಯಾರಿಕೆಯಲ್ಲಿ ತೊಡಕುಗಳುಂಟಾಗುತ್ತಿದ್ದು ಅದು ನಶಿಸುವ ಸ್ಥಿತಿಯಲ್ಲಿತ್ತು. ಅದರ ಪರಿಣಾಮದಿಂದ ಫ್ರಾನ್ಸಿನ ಆರ್ಥಿಕ ವ್ಯವಸ್ಥೆಯೇ ಹಾಳಾಗುವುದರಲ್ಲಿತ್ತು. ಪ್ಯಾಶ್ಚರ್‌ನ ಸಂಶೋಧನಾ ಸಾಮರ್ಥ್ಯದಲ್ಲಿ ನಂಬಿಕೆ ಇಟ್ಟಿದ್ದ ಫ್ರೆಂಚ್ ಸರ್ಕಾರ ಮದ್ಯಸಾರದ ಸಮಸ್ಯೆಗೆ ಸಂಶೋಧನೆ ನಡೆಸಿ ಪರಿಹಾರ ಸೂಚಿಸುವಂತೆ ಕೇಳಿಕೊಂಡಿತು.

ಮದ್ಯಸಾರದ ತಯಾರಿಕೆಗಾಗಿ ಅಣಿ ಮಾಡುತ್ತಿದ್ದ ದ್ರಾಕ್ಷಾರಸ ಕೊಳೆತು ಹೋಗುತ್ತಿತ್ತು. ಕೊಳೆಯದೆ ಸಹಜ ಸ್ಥಿತಿಯಲ್ಲಿದ್ದರೆ ಮಾತ್ರ ಅದರಲ್ಲಿ ಹುದುಗೇಳುವ ಕ್ರಿಯೆ (FERMENTATION) ಜರುಗಿ ಮದ್ಯಸಾರದ ಉತ್ಪಾದನೆಯಾಗುತ್ತಿತ್ತು. ದ್ರಾಕ್ಷಾರಸ ಕೊಳೆತು ಹೋಗುವುದು ಮತ್ತು ಅದರಲ್ಲಿ ಸಹಜವಾಗಿ ಹುದುಗೇಳುವ ಕ್ರಿಯೆಗಳ ಹಿಂದೆ ಇರುವ ಗುಟ್ಟನ್ನು ಗುರುತಿಸುವುದು ಪ್ಯಾಶ್ಚರ್ ಮೊದಲು ಎದುರಿಸಬೇಕಾದ ಸಮಸ್ಯೆ. ಅದಕ್ಕಾಗಿ ಮೊದಲು ಕೆಲವು ಮೂಲಭೂತ ಸಂಶೋಧನೆಗಳನ್ನು ಪ್ಯಾಶ್ಚರ್ ಕೈಗೊಂಡ. ಕೆಲವು ನಿಯಂತ್ರಿತ ಪ್ರಯೋಗಗಳಿಂದ ದ್ರಾಕ್ಷಾರಸದಲ್ಲಿ ಸಹಜ ರೀತಿಯಲ್ಲಿ ಹುದುಗೇಳುವ ಕ್ರಿಯೆ ಜರುಗಲು ಅದು ಬಾಹ್ಯಸಂಪರ್ಕ ಪಡೆದಿರುವುದು ಅತ್ಯವಶ್ಯಕವೆಂಬುದನ್ನು ಪ್ರಯೋಗಗಳಿಂದ ಶ್ರುತಪಡಿಸಿಕೊಳ್ಳಬೇಕಾಯಿತು. ಆ ಸುಲುವಾಗಿ ಹುದುಗೇಳಿಸಲು ತಯಾರಿಸಿಕೊಂಡ ದ್ರಾಕ್ಷಾರಸದ ಎರಡು ಮಾದರಿಗಳನ್ನು ಎರಡು ಪ್ರತ್ಯೇಕ ಜಾಡಿ (JARS) ಗಳಲ್ಲಿ ಇರಿಸಿದ. ಒಂದು ಜಾಡಿಯಲ್ಲಿ ದ್ರಾಕ್ಷಾರಸವನ್ನು ಚೆನ್ನಾಗಿ ಕುದಿಸಿ, ಬಿರಡೆ ಹಾಕಿ ಮುಚ್ಚಿ ಇಡಲಾಯಿತು. ಮತ್ತೊಂದನ್ನು ಕಾಯಿಸದೇ ಬಾಯಿ ತೆರೆದಿಟ್ಟು ವಾತಾವರಣದ ಗಾಳಿಯ ಸಂಪರ್ಕ ಉಂಟಾಗುವಂತೆ ಮಾಡಿ ಇರಿಸಲಾಯಿತು. ಒಂದೆರಡು ದಿನಗಳು ಕಳೆದ ನಂತರ ಎರಡು ಜಾಡಿಗಳನ್ನೂ

ಪರೀಕ್ಷಿಸಲಾಯಿತು. ಕುದಿಸಿ, ಜಾಡಿಯ ಬಾಯಿಗೆ ಬಿರಡೆ ಹಾಕಿಟ್ಟಿದ್ದರಲ್ಲಿ ಹುದುಗೇಳುವ ಕ್ರಿಯೆ ಜರುಗಿರಲಿಲ್ಲ. ಬಾಯಿ ತೆರೆದಿಟ್ಟ ಜಾಡಿಯಲ್ಲಿನ ದ್ರಾಕ್ಷಾರಸದಿಂದ ಮದ್ಯಸಾರ ಉತ್ಪಾದನೆಯಾಗಿತ್ತು. ಈ ಪ್ರಯೋಗದಿಂದ ದ್ರಾಕ್ಷಾರಸದಲ್ಲಿ ಹುದುಗೇಳುವ ಕ್ರಿಯೆ ಜರುಗಲು ವಾತಾವರಣದಲ್ಲಿರಬಹುದಾದ ಜೈವಿಕ ವಸ್ತುವಿನ ಸಂಪರ್ಕ ಅವಶ್ಯಕವಾಗಿರಬೇಕೆಂದಾಯಿತು. ದ್ರಾಕ್ಷಾರಸವನ್ನು ಕುದಿಸಿ ಬಿಸಿ ಮಾಡಿದಾಗ ಅದಕ್ಕೆ ಮೊದಲೇ ಸಂಪರ್ಕಕ್ಕೆ ಬಂದಿರಬಹುದಾದ ಅಗೋಚರ ಜೈವಿಕ ವಸ್ತು ನಾಶವಾಗುತ್ತದೆ. ಹಾಗೂ ನಂತರ ಬಿರಡೆ ಹಾಕಿ ಮುಚ್ಚಿಡುವುದರಿಂದ ಮತ್ತು ವಾತಾವರಣದ ಸಂಪರ್ಕ ಬರುವುದಿಲ್ಲ. ಹಾಗೆ ಬಾಯಿ ತೆರೆದಿಟ್ಟ ದ್ರಾಕ್ಷಾರಸದ ಸಂಪರ್ಕಕ್ಕೆ ಬರುವ ಅಗೋಚರ ಜೈವಿಕ ವಸ್ತುವಿಗೆ ಪ್ಯಾಶ್ಚರ್ ''ಯೀಷ್ಟ್'' (YEAST, ಕಿಣ್ವ) ಎಂದು ನಾಮಕರಣ ಮಾಡಿದ. ಅಂತಹ ವಸ್ತುಗಳನ್ನು ಕಣ್ಣಿನಿಂದ ನೋಡಲು ಅಸಾಧ್ಯವಾಗಿದ್ದ ಆ ಸಮಯದಲ್ಲಿ ಪ್ಯಾಶ್ಚರ್ ಅವುಗಳ ಇರುವಿಕೆಯನ್ನು ಊಹಿಸಿದ್ದು ಈಗ ಒಂದು ಪವಾಡವೆಂದೇ ಹೇಳಬಹುದು.

ಯೀಷ್ಟ್, ಬ್ಯಾಕ್ಟೀರಿಯಾ (BACTERIA) ಅಥವಾ ಇನ್ನಾವುದೇ ಸೂಕ್ಷ್ಮಜೀವಿ (MICROBE) ಗಳನ್ನು ಪ್ರತ್ಯಕ್ಷವಾಗಿ ಪ್ರದರ್ಶಿಸಲಾಗದಿದ್ದ ಆ ಕಾಲದಲ್ಲಿ ಈ ಜೀವಿಗಳು ಸ್ವಯಂ ಉತ್ಪಾದನೆ (SELF GENERATION) ಆಗುತ್ತವೆಂಬ ನಂಬಿಕೆ ಧಾರ್ಮಿಕ ವಲಯಗಳಲ್ಲಿತ್ತು. ಹುಳಹುಪ್ಪಟೆ, ನೊಣ, ನುಸಿ, ಮುಂತಾದ ಇತರ ಸೂಕ್ಷ್ಮ ಕ್ರಿಮಿಗಳು ಕೊಳೆತು ನಾರುವ ತಿಪ್ಪೆಗುಂಡಿಗಳಲ್ಲಿ ಸ್ವಯಂ ಜನಿಸುತ್ತವೆಂಬುದು ಅಂತಹವರ ವಾದವಾಗಿತ್ತು; ಬಹುಪಾಲು ಜನರು ಆ ತರಹದ ವಾದವನ್ನುಬೆಂಬಲಿಸುತ್ತಲೂ ಇದ್ದರು. ವೈಜ್ಞಾನಿಕ ವಲಯಗಳಲ್ಲಿ ಮಾತ್ರ ಈ ವಾದಗಳಿಗೆ ಪ್ರಬಲ ವಿರೋಧವಿತ್ತು. ಹಾಗೂ ಲೂಯಿ ಪ್ಯಾಶ್ಚರ್ ತನ್ನ ನಿಯಂತ್ರಿತ ಪ್ರಯೋಗಗಳಿಂದ ಪ್ರದರ್ಶಿಸುತ್ತಿದ್ದ ಫಲಿತಾಂಶಗಳು ಬರಬರುತ್ತಾ ಜನರು ಸ್ವಯಂ ಉತ್ಪಾದನೆಯ ತತ್ವದಲ್ಲಿ ಹುರುಳಿಲ್ಲವೆಂಬುದನ್ನು ಒಪ್ಪಿಕೊಳ್ಳಬೇಕಾಯಿತು.

ಮುಂದೆ ದ್ರಾಕ್ಷಾರಸ ಕೊಳೆತು, ಅದರಿಂದ ಮದ್ಯಸಾರ ಉತ್ಪಾದನೆ ಯಾಗದಿರುವುದಕ್ಕೂ ಪ್ಯಾಶ್ಚರ್ ಇದೇ ರೀತಿಯ ನಿಯಂತ್ರಿತ ಪ್ರಯೋಗಗಳನ್ನು ಕೈಗೊಂಡನು. ಅವನ ವೀಕ್ಷಣೆಯ ಪ್ರಕಾರ ಸಾಮಾನ್ಯವಾಗಿ ರೋಗಪೀಡಿತ ದ್ರಾಕ್ಷಿ ಹಣ್ಣುಗಳನ್ನು ದ್ರಾಕ್ಷಾರಸ ತಯಾರಿಸಲು ಬಳಸಿಕೊಂಡ ಸಂದರ್ಭಗಳಲ್ಲಿ

ಮಾತ್ರ ಆ ರಸ ಕೊಳೆತುಬಿಡುತ್ತಿತ್ತು. ದ್ರಾಕ್ಷಾರಸ ಹಾಗೆ ಕೊಳೆಯುವುದಕ್ಕೆ ರೋಗ ಪೀಡಿತ ದ್ರಾಕ್ಷಿ ಹಣ್ಣುಗಳಲ್ಲಿದ್ದಿರಬಹುದಾದ ಸೂಕ್ಷ್ಮ ಜೀವಾಣುಗಳು ಕಾರಣವಾಗುತ್ತವೆಂಬುದ ಪ್ಯಾಶ್ಚರನ ವಾದವಾಯಿತು. ಈ ವಾದವನ್ನು ಪ್ರಾತ್ಯಕ್ಷಿಕವಾಗಿ ತೋರಿಸಲು ಒಂದು ಪ್ರಯೋಗವನ್ನು ನಿಯೋಜಿಸಿದನು. ರೋಗಪೀಡಿತ ದ್ರಾಕ್ಷಿಹಣ್ಣುಗಳಿಂದ ತಯಾರಿಸದ ರಸವನ್ನು ಗಾಜಿನ ಜಾಡಿಯಲ್ಲಿರಿಸಿ ಚೆನ್ನಾಗಿ ಕುದಿಸಿದ. ಅದೇ ರಸವಿರುವ ಜಾಡಿಯನ್ನು ಬಾಯಿ ತೆರೆಯಿಸಿ ಒಂದೆರಡು ದಿನಗಳು ಇರಿಸಿದಾಗ ಅದರಲ್ಲಿ ಎಂದಿನಂತೆ ಮದ್ಯಸಾರ ಉತ್ಪಾದನೆಯಾಗಿತ್ತು. ಇದನ್ನು ಕಣ್ಣಾರೆ ಕಂಡ ಜನ ಸೋಜಿಗಪಟ್ಟರು. ದ್ರಾಕ್ಷಾರಸವನ್ನು ಕಾಯಿಸುವುದರಿಂದ ಅದರಲ್ಲಿ ಮಿಳಿತವಾಗಿರಬಹುದಾದ ಸೂಕ್ಷ್ಮ ಜೀವಾಣುಗಳು ನಾಶವಾಗುತ್ತವೆ; ಮದ್ಯಸಾರದ ಉತ್ಪಾದನೆಗೆ ಅವಶ್ಯಕವಾದ ಮೂಲ ಘಟಕಗಳು ನಾಶವಾಗದೆ ಉಳಿದುಕೊಳ್ಳುವುದರಿಂದ, ಅದಕ್ಕೆ ಮತ್ತೆ ವಾತಾವರಣದಿಂದ ಯೀಸ್ಟ್ ಮಿಳಿತವಾಗಿ ಹುದುಗೇಳುತ್ತದೆಂಬುದನ್ನು ಪ್ಯಾಶ್ಚರ್ ಈ ಪ್ರಯೋಗಗಳಿಂದ ತೋರಿಸಿಕೊಟ್ಟಿದ್ದನು.

ಪ್ಯಾಶ್ಚರ್, ದ್ರಾಕ್ಷಾರಸದಲ್ಲಿ ಹುದುಗೇಳಿಸಿ ಮದ್ಯಸಾರವನ್ನು ಪಡೆಯುವ ಮತ್ತು ಕೊಳೆತು ದ್ರಾಕ್ಷಾರಸವನ್ನು ಕುದಿಸಿ, ಅದರಲ್ಲಿರಬಹುದಾದ ಸೂಕ್ಷ್ಮ ಜೀವಾಣುಗಳನ್ನು ನಾಶಪಡಿಸಬಹುದೆಂದು ಪರೋಕ್ಷವಾಗಿ ಮಾಡಿ ತೋರಿಸಿದ ಫಲಿತಾಂಶಗಳು ಲಿಸ್ಟರ್‌ನ ಯೋಚನಾ ಲಹರಿಯನ್ನು ಇನ್ನೂ ಚುರುಕುಗೊಳಿಸಿತು. ತೆರದ ಗಾಯದಲ್ಲಿ ಕೀವಾಗುವುದು, ತೆರೆದಿಟ್ಟ ಜಾಡಿಯಲ್ಲಿರುವ ದ್ರಾಕ್ಷಾರಸದಲ್ಲಿ ಹುದುಗೇಳುವ ಕ್ರಿಯೆಗೆ ಸರಿ ಸಮಾನದಾಗುತ್ತದೆಂಬುದು ಅವನ ಅನಿಸಿಕೆಯಾಯಿತು. ಅದೇ ರೀತಿ ಕೊಳೆತ ದ್ರಾಕ್ಷಾರಸದಲ್ಲಿರಬಹುದಾದ ಸೂಕ್ಷ್ಮ ಜೀವಾಣುಗಳು ಅದನ್ನು ಕುದಿಸಿದಾಗ ನಾಶವಾಗುತ್ತವೆ. ಮತ್ತೆ ತೆರೆದಿಟ್ಟಾಗ ವಾತಾವರಣದಿಂದ ಯೀಷ್ಟ್ ಸೇರಿ ಮದ್ಯಸಾರ ಉತ್ಪಾದನೆಯಾಗುತ್ತದೆ ಎಂಬ ತತ್ತ್ವ ಲಿಸ್ಟರ್‌ನ ಮನಸ್ಸಿನಲ್ಲಿ ಮೂಡಿಬಂದಿತು. ಗಾಯಗಳಲ್ಲಿ ಕೀವಾದಾಗ ಅದರಲ್ಲಿರಬಹುದಾದ ಸೂಕ್ಷ್ಮ ಜೀವಾಣುಗಳನ್ನು ನಾಶಮಾಡುವುದು ಹೇಗೆ ಎಂಬುದು ಮುಂದಿನ ಸಮಸ್ಯೆ. ಪ್ಯಾಶ್ಚರ್ ಕೊಳೆತ ದ್ರಾಕ್ಷಾರಸವನ್ನು ಕಾಯಿಸಿ ಬಿಸಿ ಮಾಡುವಂತೆ ಜೀವಂತ ಇರುವ ರೋಗಿಗಳ ಗಾಯಗಳನ್ನು ಬಿಸಿ ಮಾಡುವುದಂತೂ ಅಸಾಧ್ಯದ ಕೆಲಸ.

ದ್ರಾಕ್ಷಾರಸದಲ್ಲಿ ಹುದುಗೇಳುವ ಮತ್ತು ಗಾಯಗಳಲ್ಲಿ ಕೀವಾಗುವ ಕ್ರಿಯೆಗಳಲ್ಲಿ ಸಾಮ್ಯತೆ ಇರುವುದು ಲಿಸ್ಟರ್‌ಗೆ ಮನದಟ್ಟಾದ ಮೇಲೆ ಪ್ಯಾಶ್ಚರ್‌ನ

ಪ್ರಯೋಗ ಫಲಿತಾಂಶಗಳನ್ನು ತಾನು ಸ್ವತಃ ಖಚಿತಪಡಿಸಿಕೊಳ್ಳಬೇಕೆಂಬ ಇಚ್ಛೆಯಾಯಿತು. ಪ್ಯಾಶ್ಚರ್ ಮಾಡಿದಂತೆ ಒಳ್ಳೆಯ ದ್ರಾಕ್ಷಾರಸ ಮತ್ತು ಕೊಳೆತ ದ್ರಾಕ್ಷಾರಸಗಳೆರಡರ ಮಾದರಿಗಳನ್ನು ತಯಾರಿಸಿಕೊಂಡು, ಪ್ಯಾಶ್ಚರ್ ಮಾಡಿದ ಪ್ರಯೋಗಗಳನ್ನು ಮತ್ತೆ ಮಾಡಿ, ಅದೇ ಫಲಿತಾಂಶಗಳನ್ನು ಮಾಡಿದನು. ಮಾನವ ಮೂತ್ರದಲ್ಲೂ ಈ ತರಹದ ಬದಲಾವಣೆಗಳಾಗುತ್ತವೆ ಎಂಬುದರ ಬಗೆಗೂ ಕೆಲವು ಪ್ರಯೋಗಗಳನ್ನು ಜರುಗಿಸಿದನು. ಮೂತ್ರವನ್ನು ಕೆಲ ಸಮಯ ತೆರೆದಿಟ್ಟಾಗ ವಾತಾವರಣದ ಸೂಕ್ಷ್ಮಾಣುಗಳು ಬೆರತು ಅದು ಹಳಸಿದಂತಾಗುತ್ತದೆ. ಮೂತ್ರವನ್ನು ಕಾಯಿಸಿ ನಂತರ ವಾತಾವರಣ ಸಂಪರ್ಕ ಉಂಟಾಗದಂತೆ ಮುಚ್ಚಿ ಇಟ್ಟಾಗ ಅದು ಹಳಸುತ್ತಿರಲಿಲ್ಲ. ಗಾಳಿಯ ಸಂಪರ್ಕ ಮೂತ್ರಕ್ಕೆ ಬರದಂತೆ ಮಾಡಲು ಇನ್ನೂ ಕೆಲವು ಪ್ರಯೋಗಗಳನ್ನು ಸಹ ಲಿಸ್ಟರ್ ಯೋಜಿಸಿದ. ಅದಕ್ಕಾಗಿ ವಿವಿಧ ರೀತಿಯಲ್ಲಿ ಕೊಂಕಾಗಿ ಬಾಗಿಸಿದ ಗಾಜಿನ ಬುದ್ಧಲಿಗಳು ತಯಾರಾದವು. ಕೆಲವು ಬುದ್ಧಲಿಗಳ ಕೊರಳು ನೇರವಾಗಿದ್ದರೆ ಮತ್ತೆ ಕೆಲವು ಕೊಂಕಾಗಿರುವಂತೆ ತಯಾರು ಮಾಡಿದನು. ಕೊಂಕಾಗಿ ಬಗ್ಗಿಸಿದ ಕೊರಳು ಇರುವ ಬುದ್ದಲಿಯಲ್ಲಿದ್ದ ಮೂತ್ರಕ್ಕೆ ಗಾಳಿಯ ಧೂಳಿನ ಕಣಗಳ ನೇರ ಸಂಪರ್ಕ ಉಂಟಾಗುತ್ತಿರಲಿಲ್ಲ ವಾದುದರಿಂದ, ಆ ಮೂತ್ರ ಹಳಸುತ್ತಿರಲಿಲ್ಲ. ಆದರೆ, ಬುದ್ದಲಿಯ ತಳದಲ್ಲಿರುವ ಮೂತ್ರ, ಕೊಂಕಿರುವ ಜಾಗವನ್ನು ಮುಟ್ಟುವಂತೆ ಬಗ್ಗಿಸಿದಾಗ ವಾತಾವರಣದ ಸಂಪರ್ಕಕ್ಕೆ ಬಂದು ಧೂಳಿನ ಕಣಗಳು ಮಿಳಿತವಾಗುವುದರಿಂದ ಮೂತ್ರ ಹಳಸುತ್ತಿತ್ತು. ಈ ಸರಳ ಪ್ರಯೋಗ ಅದೆಷ್ಟು ಪರಿಣಾಮಕಾರಿಯಾಗಿರುತ್ತಿತ್ತೆಂದರೆ, ಲಿಸ್ಟರ್ ದಂಪತಿಗಳು ತಾವು ಹೋಗುತ್ತಿರುವ ಕಡೆಗಳಿಗೆಲ್ಲಾ ಆ ಬುದ್ದಲಿಗಳನ್ನು ಜೋಪಾನವಾಗಿ ತೆಗೆದುಕೊಂಡು ಹೋಗಿ ಪ್ರಯೋಗಗಳನ್ನು ವೈದ್ಯರು ಮತ್ತು ಜನಸಾಮಾನ್ಯರಿಗೂ ಪ್ರದರ್ಶಿಸುತ್ತಿದ್ದರು !

ಪ್ಯಾಶ್ಚರ್‌ನ ತತ್ವಗಳನ್ನು ಲಿಸ್ಟರ್ ಪ್ರಚಾರ ಮಾಡತೊಡಗಿದ ನಂತರ ಕೆಲವು ವೈದ್ಯರು, ಗಾಯಗಳಿಗೆ ಗಾಳಿ ನುಗ್ಗದಂತೆ, ಅವಕ್ಕೆ ಕೆಲವು ಪದಾರ್ಥಗಳನ್ನು ಮುಚ್ಚಿ ಸೀಲ್ (SEAL) ಮಾಡಲಾರಂಭಿಸಿದರು. ಆದರೂ ಅವುಗಳಲ್ಲಿ ಕೀವು ಆಗುವುದನ್ನು ತಪ್ಪಿಸಲು ಸಾಧ್ಯವಾಗುತ್ತಿರಲಿಲ್ಲ. ಲಿಸ್ಟರ್ ಅದಕ್ಕೂ ಒಂದು ವಿವರಣೆ ನೀಡಿದ. ಕೇವಲ ಗಾಳಿಯೇ ಕೀವು ಉಂಟು ಮಾಡುವುದರ ಕಾರಣವಲ್ಲ. ಗಾಳಿಯಲ್ಲಿರುವ ಯಾವುದೋ ಒಂದು ವಸ್ತು ಗಾಯವಾದೊಡನೆ ಗಾಯಕ್ಕೆ

ಸೇರುವುದರಿಂದ ಕೀವು ಉದ್ಭವವಾಗಬಹುದೆಂದು ಪ್ರತಿಪಾದಿಸಿದ. ಅವುಗಳನ್ನು ಪ್ಯಾಶ್ಚರ್ "ಮಿಣಜೀವಿಗಳು" (MICROBES GERMS) ಎಂದು ಹೇಳುತ್ತಿರುವುದು ಎಂಬ ವಿಷಯವನ್ನು ಅವರ ಗಮನಕ್ಕೆ ತಂದ. ಹೀಗೆ ಲೂಯಿ ಪ್ಯಾಶ್ಚರ್ ತೋರಿಸಿದ ಮಾರ್ಗಕ್ಕೆ ಇನ್ನೂ ಹೆಚ್ಚು ಬೆಳಕನ್ನು ಹಾಯಿಸಿ ದಾರಿ ಸುಗಮವಾಗುವಂತೆ ಮಾಡುವ ಪ್ರಯತ್ನ ಮಾಡುತ್ತಿದ್ದ.

ಲಿಸ್ಟರ್ ಹೀಗೆ ಪ್ರತಿಪಾದಿಸುತ್ತಿದ್ದ ವಾತಾವರಣದಲ್ಲಿರಬಹುದಾದ ಮಿಣಜೀವಿಗಳನ್ನು ಸ್ವತಃ ಅವನಾಗಲೀ ಅಥವಾ ಪ್ಯಾಶ್ಚರ್ ಆಗಲೀ ಆ ತನಕ ಕಣ್ಣಾರೆ ಕಂಡಿರಲಿಲ್ಲ. ಪುರಾತನ ಕಾಲದಿಂದಲೂ ಅವುಗಳ ಅಸ್ತಿತ್ವದ ಬಗೆಗೆ ಕೆಲವರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದರಾದರೂ, ಯಾವುದೇ ಪ್ರಾತ್ಯಕ್ಷತೆಯಿಂದ ಸಮರ್ಥಿಸಲು ಸಾಧ್ಯವಾಗಿರಲಿಲ್ಲ. ಆದರೂ ಲೂಯಿ ಪ್ಯಾಶ್ಚರ್ ತನ್ನ ನಿಯಂತ್ರಿತ ಪ್ರಯೋಗಗಳಿಂದ ಅವುಗಳ ಇರುವಿಕೆಯನ್ನು ಸಾಕಷ್ಟು ನಿಖರತೆಯಿಂದ ಸಾದರಪಡಿಸಿದ್ದನೆಂದೇ ಹೇಳಬಹುದು. ಜೋಸೆಫ್ ಲಿಸ್ಟರ್, ಪ್ಯಾಶ್ಚರ್‌ನ ಪ್ರತಿಪಾದನೆಗಳನ್ನು ಸಂಪೂರ್ಣವಾಗಿ ಒಪ್ಪಿಕೊಂಡು ಇನ್ನೂ ಹೆಚ್ಚು ಪ್ರಭಾವಯುತವಾಗಿ ಪ್ರಚಾರ ಮಾಡಿದ. ಕಣ್ಣುಗಳಿಂದ ನೊಣ, ನುಸಿ ಮುಂತಾದವು ಹಾರಾಡುವುದನ್ನು ನಾವು ನೋಡುವಂತೆ, ವಾತಾವರಣದಲ್ಲಿ ಕಣ್ಣಿಗೆ ಅಗೋಚರ ಮಿಣಜೀವಿಗಳು ತೇಲಾಡುತ್ತಿರಬಹುದಾದ ಸಾಧ್ಯತೆ ನಮ್ಮ ಮನಸ್ಸಿನಲ್ಲಿ ಊಹಿಸಿಕೊಳ್ಳುವಂತಾಗಬೇಕೆಂಬುದು ಲಿಸ್ಟರ್‌ನ ವಾದವಾಗಿರುತ್ತಿತ್ತು. ಹಾಗೆ ಊಹಿಸಿಕೊಳ್ಳಲು ಸಾಧ್ಯವಾದರೆ ಮಾತ್ರ ನಾವು ಅವುಗಳ ವಿರುದ್ಧ ಕಾರ್ಯಾಚರಣೆ ಕೈಗೊಳ್ಳಲು ಸಾಧ್ಯವಾಗುತ್ತದೆ; ಈ ವಾದವೇ ಇನ್ನು ಎಲ್ಲರಿಗೂ ದಾರಿ ತೋರುವ ಧ್ರುವ ತಾರೆಯಾಗಬೇಕೆಂದು 1868 ತನ್ನ ಒಂದು ಭಾಷಣದಲ್ಲಿ ಭವಿಷ್ಯ ನುಡಿದಿದ್ದ.

ವಾತಾವರಣದಲ್ಲಿ ಮಿಣ ಜೀವಿಗಳಿದ್ದು ಅವುಗಳಿಂದಲೇ ಗಾಯದಲ್ಲಿ ಕೀವಾಗುತ್ತದೆಂಬುದನ್ನು ಒಪ್ಪಿಕೊಂಡು, ಅದನ್ನು ಪ್ರಾಯೋಗಿಕವಾಗಿಯೂ ಖಚಿತಪಡಿಸಿಕೊಂಡ ಲಿಸ್ಟರ್, ಹಾಗೆ ಗಾಯಗಳಲ್ಲಿ ಕೀವಾಗುವುದನ್ನು ತಡೆಗಟ್ಟಬಹುದಾದ ಬಗೆಗೆ ಯೋಜನೆ ಮಾಡತೊಡಗಿದ. ಪ್ಯಾಶ್ಚರ್ ದ್ರಾಕ್ಷಾರಸವನ್ನು ಕಾಯಿಸುತ್ತಿದ್ದಂತೆ, ಗಾಯಗಳನ್ನು ಕಾಯಿಸುವುದಂತೂ

ಸಾಧ್ಯವಿರಲಿಲ್ಲ. ಈ ಸಮಸ್ಯೆಯನ್ನು ತನ್ನ ಸಂಪರ್ಕಕ್ಕೆ ಬರುತ್ತಿದ್ದ ವೈದ್ಯರು ಮತ್ತು ವಿಜ್ಞಾನಿಗಳ ಹತ್ತಿರ ಚರ್ಚಿಸುತ್ತಿದ್ದ.

ಕಾರ್ಲಿಸಿಲ್ ನಗರದ ಶಸ್ತ್ರವೈದ್ಯ ಡಾ. ಕ್ರೂಕ್ಸ್ ಎಂಬುವರು ಗ್ಲಾಸ್ಗೋ ಮೆಡಿಕಲ್ ಸ್ಕೂಲ್‌ಗೆ ಸಂದರ್ಶಕ ಪ್ರಾಧ್ಯಾಪಕರಾಗಿ ಬಂದಿದ್ದರು. ಲಿಸ್ಟರ್ ಅವರೊಡನೆಯೂ ಗಾಯಗಳಲ್ಲಿ ಕೀವಾಗುವ ಸಮಸ್ಯೆಯನ್ನುಚರ್ಚಿಸಿದ. ಫ್ರಾನ್ಸಿನ ರಾಸಾಯನಿಕ ಶಾಸ್ತ್ರಜ್ಞ ಲೂಯಿಪ್ಯಾಶ್ಚರ್ ಪ್ರತಿಪಾದಿಸುತ್ತಿರುವ ಮಿಣಜೀವಿಗಳಿರುವ ಸಾಧ್ಯತೆ ಮತ್ತು ಆ ದಿಸೆಯಲ್ಲಿ ತಾನೂ ಸಹ ಕೆಲವು ಪ್ರಯೋಗಗಳನ್ನು ಜರುಗಿಸಿ, ಪ್ಯಾಶ್ಚರನ್ ಅಭಿಪ್ರಾಯಗಳಿಗೆ ಬೆಂಬಲ ಕೊಡುವ ಹಾಗೂ ಆ ದಿಸೆಯಲ್ಲಿ ತಾನು ಮಾಡಿದ ಪ್ರಯೋಗಗಳನ್ನು ವಿವರಿಸಿದನು. ಚರ್ಚೆಯ ವಿಷಯಗಳನ್ನು ಪರಿಜ್ಞಾನವಿದ್ದ ಕ್ರೂಕ್ಸ್, ಕಾರ್ಲಿಸಿಲ್ ನಗರದಲ್ಲಿ ಕಳೆದ ವರ್ಷ ಜರುಗಿದ ಸೋಜಿಗದ ಸಂಗತಿಯೊಂದನ್ನು ವಿವರಿಸಿದ. ಕೆಲವು ವರ್ಷಗಳಿಂದ ಕಾರ್ಲಿಸಿಲ್ ನಗರದ ಚರಂಡಿಗಳಲ್ಲಿ ಹರಿಯುತ್ತಿ ರೊಚ್ಚೆನೀರು ಬಹಳ ದುರ್ಗಂಧಮಯವಾಗಿತ್ತು. ಊರ ಹೊರಗಿನ ಬಯಲು ಪ್ರದೇಶವೊಂದಕ್ಕೆ ಆ ನೀರು ಹರಿದು ಸೇರುತ್ತಿತ್ತು. ಅಲ್ಲಿ ಹುಲುಸಾಗಿ ಹುಲ್ಲು ಸಹಾ ಬೆಳೆದುಕೊಂಡಿರುತಿತ್ತು, ಆ ಹುಲ್ಲನ್ನು ಮೇಯುತ್ತಿದ್ದ ದನಕರುಗಳು ಒಂದಲ್ಲ ಒಂದು ವ್ಯಾದಿಯಿಂದ ಹಿಂಡು ಹಿಂಡಾಗಿ ಸಾಯುತ್ತಿದ್ದವು. ಒಂದು ವರ್ಷದಿಂದ ಆ ನಗರದ ಮುನಿಸಿಪಾಲಿಟಿಯವರು ಅಲ್ಲಿಯ ಚರಂಡಿಗಳಿಗೆ ಆಗಾಗ್ಗೆ ಕಾರ್ಬಾಲಿಕ್ ಆಮ್ಲವನ್ನು ಸುರಿಯುತ್ತಿದ್ದಾರೆ. ಚರಂಡಿಗಳು ಈಗ ಅಷ್ಟೊಂದು ದುರ್ಗಂಧವ ಬೀರುತ್ತಿಲ್ಲ. ಅಲ್ಲಿ ಬೆಳೆಯುತ್ತಿದ್ದ ಹುಲ್ಲನ್ನು ಮೇಯುವ ದನಕರುಗಳ ಸಾವೂ ಸಹಾ ಗಮನಾರ್ಹವಾಗಿ ಕಡಿಮೆಯಾಗಿದೆ ಎಂಬುದು ಡಾ. ಕ್ರೂಕ್ಸ್‌ರ ವ್ಯಾಖ್ಯಾನ. ಈ ವಿಚಾರವನ್ನು ಗಮನವಿಟ್ಟು ಕೇಳುತ್ತಿದ್ದ ಜೋಸೆಫ್ ಲಿಸ್ಟರ್‌ನ ಚುರುಕು ಬುದ್ಧಿಗೆ ಮತ್ತಷ್ಟು ಗ್ರಾಸ ದೊರೆಯಿತು. ಕಾರ್ಲಿಸಿಲ್ ನಗರದ ಚರಂಡಿಗಳ ರೊಚ್ಚೆ ದುರ್ಗಂಧ ಬೀರುತ್ತಿದ್ದುದಕ್ಕೆ ಪ್ಯಾಶ್ಚರ್ ಮತ್ತು ತಾನು ಪ್ರತಿಪಾದಿಸುತ್ತಿದ್ದ ಮಿಣಜೀವಿಗಳು ಕಾರಣವಾಗಿದ್ದಿರಬಹುದು; ರೊಚ್ಚೆಯ ನೀರಿನಿಂದ ಬೆಳೆಯುತ್ತಿದ್ದ ಹುಲ್ಲು ಮೇಯುತ್ತಿದ್ದ ಹಸುಗಳಿಗೂ ಮಿಣಜೀವಿಗಳ ಸೋಂಕು ತಗುಲಿ ಅವು ಸಾಯುತ್ತಿದ್ದವೇನೋ; ಕಾರ್ಬಾಲಿಕ್ ಆಮ್ಲದಂತಹ

ತೀಕ್ಷ್ಣದ್ರಾವಣವನ್ನು ಚರಂಡಿಗೆ ಹಾಕಿದಾಗ ಮಿಣಜೀವಿಗಳು ನಾಶವಾಗುತ್ತಿದ್ದವು. ಅಂತಹ ಮಿಣಜೀವಿಗಳಿಂದ ರೊಚ್ಚೆಯಿಂದ ಬೆಳೆದ ಹುಲ್ಲನ್ನು ಮೇಯುತ್ತಿದ್ದಹಸುಗಳಿಗೆ ವ್ಯಾಧಿ ತಗಲುತ್ತಿರಲಿಲ್ಲ. ಇದು ಲಿಸ್ಟರ್‌ನ ಮನದಾಳದಲ್ಲಿ ಉದ್ಭವಿಸಿದ ವಿಚಾರ ಧಾರೆ. ಆದರೆ ಕೀವಾಗಿರುವ ಗಾಯಗಳಲ್ಲಿನ ಮಿಣಜೀವಿಗಳನ್ನು ನಾಶಮಾಡಲು ತಾನೂ ಸಹಾ ಕಾರ್ಬಾಲಿಕ್ ಆಮ್ಲವನ್ನು ಗಾಯಗಳಿಗೆ ಸುರಿಯಬಹುದೇ ಎಂಬ ಸಂಶಯ; ಕಾರ್ಬಾಲಿಕ್ ಆಮ್ಲ ಅತೀ ತೀಕ್ಷ್ಣವಾದುದರಿಂದ ರೋಗಿಯ ಗಾಯವೇ ಅಲ್ಲದೆ ಸುತ್ತಲ ಪ್ರದೇಶವೂ ಸುಟ್ಟು ಇನ್ನೂ ಹೆಚ್ಚಿನ ಅನಾಹುತವಾಗಬಹುದಲ್ಲವೇ ಎಂಬ ಎಚ್ಚರಿಕೆಯ ಒಳದನಿಯೂ ಅವನಿಗೆ ಕೇಳಿಸದಿರಲಿಲ್ಲ. ಆದರೂ ವಿಷಯವನ್ನು ಅಷ್ಟಕ್ಕೇ ಮರೆತು ಬಿಡುವ ಜಾಯಮಾನ ಲಿಸ್ಟರ್‌ನದಲ್ಲ. ರೋಗಿಗೆ ಯಾವ ರೀತಿಯ ತೊಂದರೆಯೂ ಆಗದೆ ಕಾರ್ಬಾಲಿಕ್ ಆಮ್ಲವನ್ನು ಬಳಸಿಕೊಳ್ಳಬಹುದಾದ ರೀತಿಗಳ ಬಗೆಗೆ ಅವನು ಯೋಚಿಸಲಾರಂಭಿಸಿದ.

# ೮. ಕಾರ್ಬಾಲಿಕ್ ಆಮ್ಲ

ಕಾರ್ಬಾಲಿಕ್ ಆಮ್ಲವನ್ನು ಗಾಯಗಳಲ್ಲಿ ಹೇಗೆ ಬಳಸಬಹುದೆಂಬುದರ ಬಗ್ಗೆ ಲಿಸ್ಟರ್ ಬಹಳ ಸಮಯ ಯೋಚಿಸುತ್ತಿದ್ದ. ಆಮ್ಲವನ್ನು ತೆಳುವಾಗಿಸಿ (DILUTE) ಗಾಯದ ಮೇಲೆ ಲೇಪಿಸುವುದು ಸರಿಯಾದ ಮಾರ್ಗವೆಂಬ ಒಂದು ನಿರ್ಧಾರವಾಯಿತು. ಅದರ ಮೊದಲ ಪ್ರಯೋಗ 1865ರ ಮಾರ್ಚ್ ತಿಂಗಳಲ್ಲಿ ಆರಂಭವಾಯಿತು. ಸಂಯುಕ್ತ ಮೂಳೆ ಮುರಿತದ ಗಾಯವಿದ್ದು ಕೀವು ಸುರಿಯುತ್ತಿದ್ದ ರೋಗಿಯೊಬ್ಬನಿಗೆ ಕ್ರಮವರಿತು ಅದರ ಲೇಪನ ಜರುಗಿತು. ಇತರ ರೋಗಿಗಳಂತೆ ಅವನೂ ಸಹಾ ನಂಜೇರಿ ಕೆಲವೇ ದಿನಗಳಲ್ಲಿ ಅಸುನೀಗಿದ. ಲಿಸ್ಟರ್‌ಗೆ ಬಹಳಷ್ಟು ನಿರಾಶೆಯಾಯಿತು. ಅದರ ವಿಫಲತೆಗೆ ಕಾರಣಗಳನ್ನು ಹುಡುಕಲಾರಂಭಿಸಿದ. ಕಾರ್ಬಾಲಿಕ್ ಆಮ್ಲವನ್ನು ಲೇಪಿಸುವುದಕ್ಕೆ ಬಳಸುತ್ತಿದ್ದ ಬಟ್ಟೆ ಬರೆಗಳು ಎಂದಿನಂತೆಯೇ ಕೊಳಕಾಗಿರುತ್ತಿದ್ದವು. ಅದೇನಾದರೂ ಕಾರಣವಿರಬಹುದೆಂಬ ಸಂಶಯ ಉಂಟಾಯಿತು. ಮುಂದಿನ ಪ್ರಯೋಗ ಮಾಡುವ ಮೊದಲು ಬಹಳಷ್ಟು ಸಿದ್ಧತೆಗಳನ್ನು ಮಾಡಿಕೊಂಡೇ ಮುಂದುವರಿದ. ಲೇಪನ ಮತ್ತು ಗಾಯಗಳನ್ನು ಕಟ್ಟುವುದಕ್ಕೆ ಬಟ್ಟೆಬರೆಗಳನ್ನು ಮೊದಲೇ ಬಿಸಿ ನೀರಿನಲ್ಲಿಟ್ಟು ಕಾಯಿಸಿ, ಶುಭ್ರ ಮಾಡಿಟ್ಟುಕೊಳ್ಳುವ ಏರ್ಪಾಡಾಯಿತು. ಆಗಸ್ಟ್ 12 (1865)ರಂದು ಆಸ್ಪತ್ರೆಗೆ ದಾಖಲಾದ ಜೇಮ್ಸ್ ಗ್ರೀನ್ ಲೆಸ್ ಎಂಬ 11 ವರ್ಷದ ಬಾಲಕನ ಎಡಗಾಲಿನಲ್ಲಿ ಸಂಯುಕ್ತ ಮೂಳೆ ಮುರಿತವಾಗಿತ್ತು. ಆ ದಿನವೇ ಕುದುರೆ ಗಾಡಿ ಕಾಲಿನ ಮೇಲೆ ಹರಿದುದರ ಪರಿಣಾಮವಾಗಿ ಸುಮಾರು ಒಂದೂವರೆ ಅಂಗುಲ ಉದ್ದ ಹಾಗೂ ಮುಕ್ಕಾಲು ಅಂಗುಲ ಅಗಲ ಹರವಿನ ಗಾಯವಾಗಿತ್ತು. ಗಾಯದ ತಳದಲ್ಲೇ ಕಾಲಿನ ಮೂಳೆ ಮುರಿದಿತ್ತು. ಅದಕ್ಕೆ ಕಾರ್ಬಾಲಿಕ್ ಆಮ್ಲವನ್ನು ಸವರುವ ಮೊದಲು ಲಿಸ್ಟರ್ ತನ್ನ ಕೈಗಳನ್ನು ಸಾಬೂನು ಮತ್ತು ನೀರಿನಿಂದ ತೊಳೆದು ಶುಚಿಮಾಡಿಕೊಂಡಿದ್ದ. ಗಾಯದ ಎಲ್ಲಾ ಭಾಗಗಳಿಗೂ ಅದನ್ನು ಲೇಪಿಸಿದ ಮೇಲೆ, ಮೊದಲೇ ಸ್ವಚ್ಛವಾಗಿ ತಯಾರಿಸಿಕೊಂಡಿದ್ದ ಬಟ್ಟೆಯ ತುಂಡನ್ನು ಕಾರ್ಬಾಲಿಕ್ ಆಮ್ಲದಲ್ಲಿ ಅದ್ದಿ ಗಾಯವನ್ನು ಮುಚ್ಚಿ ಪಟ್ಟಿಹಾಕಿ ಕಟ್ಟಿದ. ಗಾಯವನ್ನು ಪ್ರತಿದಿನ ತೆರೆದು, ಸ್ವತಃ ತಾನೇ ಕೈ ತೊಳೆದುಕೊಂಡು ಆಮ್ಲವನ್ನು ಲೇಪಿಸಿ, ಬಟ್ಟೆ ಸುತ್ತಿ ಕಟ್ಟುತ್ತಿದ್ದ. ಸತತವಾಗಿ ಒಂದು ವಾರ ಈ ತರಹದ ಲೇಪನ ಮುಂದುವರಿಯಿತು. ಈ ಸಾರಿ ಗಾಯದಲ್ಲಿ ಕೀವಾಗುವ ಯಾವ ಸೂಚನೆಗಳೂ

ಕಂಡು ಬರಲಿಲ್ಲ. ಅದು ಮೊದಲ ಪ್ರಯತ್ನದಲ್ಲೇ ವಾಸಿಯಾಗುವಂತಹ ಲಕ್ಷಣಗಳಿದ್ದವು. ನಂಜಿನ ಜ್ವರ, ಸನ್ನಿಪಾತದ ಚೀತ್ಕಾರಗಳು ಪ್ರಕಟವಾಗಲೇ ಇಲ್ಲ. ಮುರಿದ ಮೂಳೆಯ ತುದಿಗಳನ್ನು ಮೊದಲೇ ಒಂದಕ್ಕೊಂದು ಸೇರಿಸಿ ಇಟ್ಟಿದ್ದರಿಂದ ಅವು ಕೂಡುವುದರಲ್ಲೂ ಯಾವ ಅನುಮಾನಗಳೂ ಇರಲಿಲ್ಲ. ಮುಂದಿನ ಕೆಲವು ವಾರಗಳಲ್ಲಿ ಬಾಲಕ ಜೇಮ್ಸ್ ಗ್ರೀನ್‌ಲೆಸ್ ಮನೆಗೆ ಹಿಂದಿರುಗಿದ. ಅದೊಂದು ಪವಾಡ ಸದೃಶ ಪರಿಣಾಮವಾಗಿತ್ತು. ಸುದ್ದಿ, ಗ್ಲಾಸ್ಗೋ, ರಾಯಲ್ ಇನ್ಫ ರ್ಮರಿಯ ಆಸ್ಪತ್ರೆಯಲ್ಲೇ ಅಲ್ಲದೇ ನಗರದ ಇತರ ಆಸ್ಪತ್ರೆಗಳಿಗೂ ಹರಡಿತು. ಮುಂದೆ ಒಂದಾದ ಮೇಲೊಂದರಂತೆ ಇತರ ರೋಗಿಗಳ ಗಾಯಗಳಿಗೂ ಕಾರ್ಬಾಲಿಕ್ ಆಮ್ಲದ ಲೇಪನದ ಚಿಕಿತ್ಸೆ ಮಾಡಲಾರಂಭಿಸಿದರು. ಯಂತ್ರವೊಂದರ ಚಕ್ರಕ್ಕೆ ಸಿಕ್ಕಿ ಹಾಕಿಕೊಂಡು ಚಿಂದಿಯಾಗಿದ್ದವನೊಬ್ಬನಿಗೆ ಲಿಸ್ಟರ್ ಇದೇ ರೀತಿಯ ಚಿಕಿತ್ಸೆಯನ್ನು ಅಳವಡಿಸಿದ. ಹಿಂದಿನ ದಿನಗಳಲ್ಲಾಗಿದ್ದರೆ ಆ ಕೈಯನ್ನು ತಕ್ಷಣ ಕತ್ತರಿಸಿ ತೆಗೆಯಲಾಗುತ್ತಿತ್ತು. ಲಿಸ್ಟರ್‌ನ ಕಾರ್ಬಾಲಿಕ್ ಆಮ್ಲ ಲೇಪನದ ಚಿಕಿತ್ಸೆ ಅವನ ಕೈ ಉಳಿಯುವಂತೆ ಮಾಡಿತು. ಈ ಗಾಯಗಳೆಲ್ಲಾ ಒಂದು ಶತಮಾನದ ಹಿಂದೆ ಸರ್ ಜಾನ್ ಹಂಟರ್ ವಿವರಿಸಿದಂತೆ ಹೆಕ್ಕಳೆ ತಯಾರಾಗಿ ನಂತರ ವಾಸಿಯಾಗುತ್ತಿದ್ದವು. ಮುಂದೆ ಹನ್ನೊಂದು ರೋಗಿಗಳಿಗೆ ಇದೇ ವಿಧಾನದ ಚಿಕಿತ್ಸೆ ಜರುಗಿತು. ಅವರೆಲ್ಲರ ಗಾಯಗಳೂ ಯಾವ ತೊಡಕುಗಳೂ ಇಲ್ಲದೆ ವಾಸಿಯಾದವು.

ಕಾರ್ಬಾಲಿಕ್ ಆಮ್ಲ ಲೇಪನದ ಮುಂದಿನ ಹತ್ತು ರೋಗಿಗಳಲ್ಲಿ ಇಬ್ಬರನ್ನು ಹೊರತುಪಡಿಸಿ ಉಳಿದವರು ತಮ್ಮ ಕೈ ಕಾಲುಗಳನ್ನು ಉಳಿಸಿಕೊಂಡರಲ್ಲದೆ ಜೀವಂತವಾಗಿಯೂ ಬದುಕಿದರು. ಅವರಲೊಬ್ಬ ಲಿಸ್ಟರ್ ಊರಲ್ಲಿರದಿದ್ದಾಗ ಆಸ್ಪತ್ರೆಗೆ ದಾಖಲಾಗಿದ್ದು ಅವನ ತೊಡೆಯ ಭಾಗವನ್ನು ಕತ್ತರಿಸಿ ತೆಗೆಯಬೇಕಾಯಿತು. ಇನ್ನೊಬ್ಬನ ಗಾಯ ವಾಸಿಯಾಗುವಂತಿದ್ದರೂ, ನಿಲ್ಲಿಸಲಾರದ ರಕ್ತಸ್ರಾವದಿಂದ ಸಾವಿಗೀಡಾದನು.

ಸಂಯುಕ್ತ ಮೂಳೆ ಮುರಿತದ ಪ್ರಕರಣಗಳಲ್ಲಿ ಒಂದಾದ ಮೇಲೊಂದರಂತೆ ಯಶಸ್ಸು ದೊರೆಯಲಾರಂಭಿಸಿದ ನಂತರ, ಲಿಸ್ಟರ್, ಕುರ, ಬಾವುಗಳ ಚಿಕಿತ್ಸೆಯನ್ನು ನಡೆಸಲು ಕಾರ್ಬಾಲಿಕ್ ಆಮ್ಲದ ಬಳಕೆಯನ್ನು ಜಾರಿಗೆ ತಂದನು. ಅವುಗಳ ಶಸ್ತ್ರ ಚಿಕಿತ್ಸೆಗೆ ಬಳಸುತ್ತಿದ್ದ ಚಾಕು, ಕತ್ತರಿಗಳನ್ನು ಕಾರ್ಬಾಲಿಕ್ ಆಮ್ಲದಲ್ಲಿ

ಕೆಲಸಮಯ ತೋಯಿಸಿ ಇಡುತ್ತಿದ್ದ. ಕತ್ತರಿಸಿ ಕೀವನ್ನು ಹೊರಬಿಟ್ಟನಂತರ ಗಾಯಗಳಿಗೆ ಕಾರ್ಬಾಲಿಕ್ ಆಮ್ಲವನ್ನು ಲೇಪಿಸುತ್ತಿದ್ದ. ಬಾವು ಕುರುಗಳಲ್ಲಿ ಮೊದಲೇ ಸೂಕ್ಷ್ಮ ಜೀವಾಣುಗಳು ಸೇರುತ್ತಿದ್ದುದರಿಂದ ನಿರೀಕ್ಷಿಸಿದಷ್ಟು ಪರಿಣಾಮಗಳು, ದೊರೆಯದಿದ್ದರೂ, ಮೊದಲಿಗಿಂತ ಉತ್ತಮ ಫಲಿತಾಂಶಗಳಾಗುತ್ತಿದ್ದುದರಲ್ಲಿ ಸಂಶಯವಿರುತ್ತಿರಲಿಲ್ಲ. ಹೀಗೆ ಗ್ಲಾಸ್ಗೋ ಆಸ್ಪತ್ರೆಯಲ್ಲಿ ವಿವಿಧ ರೀತಿಯ ಗಾಯಗಳಿಗೆ ಕಾರ್ಬಾಲಿಕ್ ಆಮ್ಲದ ಲೇಪನದ ಚಿಕಿತ್ಸೆ ಶುರುವಾದಾಗಿನಿಂದ, ಅಲ್ಲಿಯ ವಾರ್ಡುಗಳಲ್ಲಿನ ದುರ್ಗಂಧಮಯ ವಾತಾವರಣ ಅದೇ ಮೊದಲ ಬಾರಿಗೆ ಮಾಯವಾಯಿತು. ಅಲ್ಲಿ ನಿರ್ಮಲ ಶಾಂತ ವಾತಾವರಣವಿರುವುದನ್ನು ಗುರುತಿಸಬಹುದಾಗಿತ್ತು. ಗಾಯಗಳಲ್ಲಿ ಕೀವಾಗಿ, ನಂಜಿನ ಜ್ವರದಿಂದ ನರಳುವ, ಚೀರಾಡುವ ಪರಿಸ್ಥಿತಿಯೂ ಅಪರೂಪವಾಯಿತು. ಆ ಸಮಯದಲ್ಲಿ ತಂದೆಗೆ ಬರೆದ ಪತ್ರದಲ್ಲಿ ಮಾನವ ಜನಾಂಗಕ್ಕೆ ಆಗಬಹುದಾದ ಹತ್ತು ಉಪಕಾರಗಳಲ್ಲಿ ಒಂದು, ಆ ವಾರ ಜರುಗಿತ್ತೆಂದು ಲಿಸ್ಟರ್ ಭವಿಷ್ಯ ನುಡಿದಿದ್ದ.

ಜೋಸೆಫ್ ಲಿಸ್ಟರ್ ಕಾರ್ಬಾಲಿಕ್ ಆಮ್ಲವನ್ನು ಬಳಸಿದ ನಂತರ ಗಾಯಗಳು ವಾಸಿಯಾಗುವುದರಲ್ಲಿ ಉಂಟಾದ ಪರಿಣಾಮಗಳ ಬಗೆಗೆ ಲೇಖನವನ್ನು ಬರೆದು ಪ್ರಕಟಿಸಿದ ಹೆಸರಾಂತ ವೈದ್ಯಕೀಯ ಪತ್ರಿಕೆ ಲ್ಯಾನ್ಸೆಟ್ (LANCET) ನ 1867ರ ಮಾರ್ಚ್ 16ರ ಸಂಚಿಕೆಯಲ್ಲಿ ಆ ಲೇಖನ ಪ್ರಕಟವಾಯಿತು. ಗಾಯಗಳಲ್ಲಿ ಕೀವಾಗುವುದರ ಬಗೆಗೆ ತಾನು ನಿರೂಪಿಸಿದ್ದ ಸಿದ್ಧಾಂತದ ಹಿನ್ನೆಲೆ, ಫ್ರಾನ್ಸಿನ ಲೂಯಿ ಪ್ಯಾಶ್ಚರ್ ದ್ರಾಕ್ಷಾರಸ, ಹುದುಗೇಳುವುದನ್ನು ವಿವರಿಸಲು ಜರುಗಿಸಿದ ಸಂಶೋಧನೆಗಳ ಮಹತ್ವ, ಮತ್ತು ಆ ದಿಸೆಯಲ್ಲಿ ತಾನು ಕೈಗೊಂಡ ಪ್ರಯೋಗಗಳ ವಿವರಗಳು ಅದರಲ್ಲಿತ್ತು. ಗ್ಲಾಸ್ಗೋ ಆಸ್ಪತ್ರೆಯ ರೋಗಿಗಳ ಗಾಯಗಳಿಗೆ ತಾನು ನಿರೂಪಿಸಿದ ಕಾರ್ಬಾಲಿಕ್ ಆಮ್ಲದ ಲೇಪನದ ಫಲಿತಾಂಶಗಳು ಅಂಕಿ ಅಂಶಗಳನ್ನು ಉಲ್ಲೇಖಿಸಿದ್ದ. ವೈಯಕ್ತಿಕ ಪ್ರತಿಷ್ಠೆ, ಮೂಢನಂಬಿಕೆ, ಅಂಧ ಶ್ರದ್ಧೆಗಳ ದಾಸರಾಗಿದ್ದ ಆಗಿನ ವೈದ್ಯಲೋಕದ ಪ್ರಭೃತಿಗಳೆನಿಸಿದವರ ಗಮನ ಆ ಲೇಖನದ ಕಡೆ ಹರಿಯಲೇ ಇಲ್ಲ. ಕೆಲವರು ಅದನ್ನು ಓದಿದ್ದರೂ ಅದರಲ್ಲಡಗಿದ್ದ ತತ್ವಗಳ ಮಹತ್ವವನ್ನು ಅರಿಯದಾದರು. ಈ ತರಹದ ನಿರ್ಲಕ್ಷ್ಯ ಲಿಸ್ಟರ್‌ನಲ್ಲಿ ನಿರಾಶೆಯನ್ನುಂಟು ಮಾಡಿದರೂ ತನ್ನ ಕೆಲಸವನ್ನು ನಿಲ್ಲಿಸಲಿಲ್ಲ. ಬದಲಿಗೆ ಇನ್ನೂ

ಹೆಚ್ಚಿನ ಉತ್ಸಾಹದಿಂದ ತನ್ನ ಪ್ರಯೋಗಗಳನ್ನು ಮುಂದುವರಿಸಿದ. ಲಿಸ್ಟರ್‌ನ ಕಾರ್ಯದಕ್ಷತೆ ಮತ್ತು ವೈಜ್ಞಾನಿಕ ವಿಚಾರ ಸರಣಿಯಲ್ಲಿ ಅಪಾರ ನಂಬಿಕೆ ಇದ್ದ ಮಾವ ಜೇಮ್ಸ್, ಸೈಮ್ ಅವನ ಫಲಿತಾಂಶಗಳನ್ನು ಮೆಚ್ಚಿಕೊಂಡಿದ್ದರಲ್ಲದೆ, ಆ ಕಾರ್ಯವನ್ನು ಮುಂದುವರಿಸಲು ಪ್ರೋತ್ಸಾಹ ನೀಡುತ್ತಲಿದ್ದರು. ಆ ವರ್ಷದ ಡಬ್ಲಿನ್ ನಗರದಲ್ಲಿ ಜರುಗಲಿದ್ದ ಬ್ರಿಟಿಷ್ ಮೆಡಿಕಲ್ ಅಸೋಸಿಯೇಶನ್‌ನ ವಾರ್ಷಿಕ ಸಮ್ಮೇಳನದಲ್ಲಿ ಅವನ ಪ್ರಯೋಗಗಳ ವಿವರಗಳನ್ನು ಬ್ರಿಟನ್ನಿನ ವೈದ್ಯ ಸಮೂಹದೆದುರು ಪ್ರಕಟಿಸುವ ಸಲಹೆ ಮಾಡಿದರು.

# ೯. ಡಬ್ಲಿನ್ ಸಮ್ಮೇಳನ

ಬ್ರಿಟಿಷ್ ಅಸೋಷಿಯೇಶನ್‌ನ 35 ನೇಯ ವಾರ್ಷಿಕ ಸಮ್ಮೇಳನ ಐರ್ಲೆಂಡ್‌ನ ಡಬ್ಲಿನ್ ನಗರದಲ್ಲಿ ಜರುಗಿತು. ಒಂದು ಸಾವಿರದ ಎಂಟುನೂರಾ ಅರವತ್ತೇಳರ ಆಗಸ್ಟ್ 6 ರಂದು ಶುರುವಾದ ಸಮ್ಮೇಳನದಲ್ಲಿ ಬ್ರಿಟನ್, ಕೆನಡಾ, ಅಮೆರಿಕಾ, ಯುರೋಪು ಮುಂತಾದ ದೇಶಗಳ ಖ್ಯಾತ ವೈದ್ಯರನೇಕರು ಭಾಗವಹಿಸುತ್ತಿದ್ದರು. ಜೇಮ್ಸ್ ಸೈಮ್, ಹೆನ್ರಿ ಥಮ್ಸನ್, ಜೇಮ್ಸ್ ಸಿಂಪ್ಸನ್‌ರಂತಹ ವೈದ್ಯಲೋಕದ ದಿಗ್ಗಜಗಳು ಅಲ್ಲಿ ಹಾಜರಿದ್ದರು. ಡಬ್ಲಿನ್ ವಿಶ್ವವಿದ್ಯಾಲಯದ ಡಾ. ಸ್ಟೋಕ್ಸ್ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಹಲವು ವೈದ್ಯರ ಅನುಭವಗಳು ಮತ್ತು ಸಂಶೋಧನೆಗಳ ಬಗೆಗೆ ಪ್ರತಿದಿನ ಲೇಖನಗಳು ಮಂಡನೆಯಾಗುತ್ತಿದ್ದವು. ಚರ್ಚೆ, ವಾದ ವಿವಾದಗಳು ಜರುಗುತ್ತಿದ್ದವು.

ಜೋಸೆಫ್ ಲಿಸ್ಟರ್ ಲೇಖನವನ್ನು ಮಂಡಿಸುವ ಸರದಿ ಆಗಸ್ಟ್ 9 ರಂದು. ಭಾಷಣ ಕಲೆಯಲ್ಲಿ ಅಷ್ಟೇನೂ ಪಳಗಿರದ ಲಿಸ್ಟರ್ ಸ್ವಲ್ಪ ಅಳುಕಿನಿಂದಲೇ ತನ್ನ ಭಾಷಣವನ್ನು ಶುರುಮಾಡಿದ. ಮೊದಲಿಗೆ ಗಾಯಗಳಲ್ಲಿ ಕೀವಾಗುವುದರ ಬಗೆಗೆ ತಾನು ನಿರೂಪಿಸುತ್ತಿರುವ ತತ್ವಗಳ ಸಾರಾಂಶವನ್ನು ಹೇಳಿದ. ಫ್ರಾನ್ಸಿನ ಲೂಯಿಪ್ಯಾಶ್ಚರ್ ಮದ್ಯಸಾರ ಹುದುಗೇಳುವ ಬಗೆಗೆ ಮಾಡಿದ ಸಮಸ್ಯೆಗೂ ಇರುವ ಸಾಮ್ಯತೆಯತ್ತ ಸಭಿಕರ ಗಮನ ಸೆಳೆದ; ಗ್ಲಾಸ್ಗೋ ಆಸ್ಪತ್ರೆಯಲ್ಲಿ ಆ ತತ್ವದ ಆಧಾರದ ಮೇಲೆ ಗಾಯಗಳ ಕೀವಾಗುವುದಕ್ಕೆ ಕಾರಣವಾದ ಅಗೋಚರ ಮಿಣಜೀವಿಗಳ ವಿನಾಶಕ್ಕಾಗಿ ಕಾರ್ಬಾಲಿಕ್ ಆಮ್ಲವನ್ನು ಲೇಪಿಸುವುದೇ ಅಲ್ಲದೆ ತಾನು ಅನುಸರಿಸುತ್ತಿದ್ದ ಶುಚಿತ್ವದ ನಿಯಮಗಳನ್ನು ಕಟ್ಟುನಿಟ್ಟಾಗಿ ಅನುಸರಿಸುವುದನ್ನು ಒತ್ತಿಹೇಳಿದ. ಶಸ್ತ್ರ ಚಿಕಿತ್ಸೆಗೆ ಬಳಸುವ ಸಲಕರಣೆ ಮತ್ತು ಬಟ್ಟೆ ಬರೆಗಳನ್ನು ಬಿಸಿ ನೀರಿನಲ್ಲಿ ಕುದಿಸಿ, ಚಿಕಿತ್ಸೆಯ ಮೊದಲು ವೈದ್ಯರು ಕೈಗಳನ್ನು ತೊಳೆದುಕೊಳ್ಳುವುದನ್ನೂ ಪ್ರಸ್ತಾಪಿಸಿದ. ಈ ವಿಧಾನಗಳನ್ನೆಲ್ಲಾ ಒಟ್ಟಾಗಿ ಆಂಟಿಸೆಪ್ಟಿಕ್ ನಿಯಮಗಳೆಂದು (ಪೂತಿನಾಶಕ) ಕರೆದಿರುವುದಾಗಿ ಹೇಳಿದ. ಭಾಷಣ ಮುಗಿದ ನಂತರದ ಸಭಿಕರ ಕರತಾಡನ ಅಷ್ಟೇನೂ ಉತ್ತೇಜನಕರವಾಗಿರಲಿಲ್ಲ.

ಲಿಸ್ಟರ್‌ನ ಭಾಷಣ ಮುಂದುವರಿಯುತ್ತಿರುವಾಗಲೇ ಕೆಲವು ಸಭಿಕರಿಂದ ವಿಲಕ್ಷಣ ಪ್ರತಿಕ್ರಿಯೆಗಳಾಗುತ್ತಿದ್ದುದನ್ನು ಗಮನಿಸಬಹುದಾಗಿತ್ತು. ಕೆಲವರು ಮುಸು ಮುಸು ನಗುವಂತಿದ್ದರೆ ಮತ್ತೆ ಕೆಲವರ ಮುಖದಲ್ಲಿ ವ್ಯಂಗ್ಯದ ಛಾಯೆ ಎದ್ದು ಕಾಣುತ್ತಿತ್ತು. ಇನ್ನೂ ಕೆಲವರು ಮುಖ ಸಿಂಡರಿಸಿಕೊಂಡು, ಸಿಟ್ಟುಗೊಂಡಂತಿದ್ದರು.

ಭಾಷಣ ಮುಗಿದು, ಲಿಸ್ಟರ್ ವೇದಿಕೆಯಿಂದ ಕೆಳಗಿಳಿಯುವಷ್ಟರಲ್ಲೇ ಹಲವು ವೈದ್ಯರು ಪ್ರಶ್ನೆಗಳನ್ನು ಕೇಳುವ ಅವಕಾಶಕ್ಕಾಗಿ ಎದ್ದು ನಿಂತರು. ಜೇಮ್ಸ್ ಸಿಂಪ್ಸನ್ ಎಲ್ಲಿಲ್ಲದ ತವಕದಿಂದ ಮಾತನಾಡುವ ಹುಮ್ಮಸ್ಸಿನಲ್ಲಿದ್ದಂತಿತ್ತು. ಆದರೆ ಅಧ್ಯಕ್ಷರ ಗಮನ ಮಾಂಟ್ರಿಯಾಲ್‌ನ ಡಾ. ಹಿಂಗ್‌ಸ್ಟನ್‌ರ ಕಡೆ ಮೊದಲು ಹರಿದಿದ್ದರಿಂದ ಅವರಿಗೆ ಮೊದಲು ಮಾತನಾಡುವ ಅವಕಾಶ ಮಾಡಿಕೊಟ್ಟರು. ಲಿಸ್ಟರ್‌ನ ಭಾಷಣದ ಮೂಲ ಉದ್ದೇಶ ಅವರ ತಲೆಗೆ ಹೋದಂತಿರಲಿಲ್ಲ. ಕಾರ್ಬಾಲಿಕ್ ಆಮ್ಲವನ್ನು ಹಲವು ವರ್ಷಗಳ ಹಿಂದೆ ಯೂರೋಪಿನಲ್ಲಿ ಬಳಸಿದ್ದಾಗಿದೆ; ಅದರಿಂದ ಒಳ್ಳೆಯ ಪರಿಣಾಮ ಗಳಾಗದಿದ್ದುದರಿಂದ ಕೈ ಬಿಡಲಾಗಿತ್ತು; ಅದನ್ನೇ ಮತ್ತೆ ಪ್ರಸ್ತಾಪಿಸುವುದು ಸರಿಯಲ್ಲ. ಎಲ್ಲಕ್ಕಿಂತ ಮಿಗಿಲಾಗಿ ರಾಸಾಯನ ಶಾಸ್ತ್ರಜ್ಞನೆಂದುಕೊಳ್ಳುವ ಲೂಯಿ ಪ್ಯಾಶ್ಚರ್ ಒಬ್ಬ ಅನಾಮಧೇಯ; ಅವನ ರಾಸಾಯನ ಶಾಸ್ತ್ರೀಯ ಪ್ರಯೋಗಗಳ ಫಲಿತಾಂಶಗಳು ಶಸ್ತ್ರ ವೈದ್ಯರಲ್ಲಿ ಗಾಯಗಳಲ್ಲಿ ಕೀವಾಗುವುದಕ್ಕೂ ಆದಾವ ಸಂಬಂಧವೆಂದು ಲಿಸ್ಟರ್‌ನನ್ನು ಪ್ರಶ್ನಿಸಿದರು.

ಅಷ್ಟರಲ್ಲೇ ಜೇಮ್ಸ್ ಸಿಂಪ್ಸನ್ ತಮ್ಮ ಆಸನದಿಂದ ಮೇಲೆದ್ದರು. ಲಿಸ್ಟರ್ ಪ್ರತಿಪಾದಿಸಿದ ಪ್ರತಿಯೊಂದು ಅಂಶವನ್ನೂ ಪ್ರಶ್ನಿಸಿ ಹಿಗ್ಗಾಮುಗ್ಗಾ ಜಾಲಾಡಿಸಿ, ಟೀಕಿಸಿದರು. ಗಾಯಗಳಲ್ಲಿ ಕೀವಾಗುವುದಕ್ಕೆ ಕಾರಣವೆನ್ನುವ ಸೂಕ್ಷ್ಮ ಜೀವಾಣುಗಳನ್ನು ಲಿಸ್ಟರ್ ಅಥವಾ ಪ್ಯಾಶ್ಚರ್ ಪ್ರದರ್ಶಿಸದೆ ಅವೇ ಕಾರಣವೆಂದು ವಾದಿಸುವುದು ಅವೈಜ್ಞಾನಿಕವಾಗುತ್ತದೆ; ಅಲ್ಲದೆ ಕೆಲವು ವರ್ಷಗಳ ಹಿಂದೆ ಲಿಮೈರೇ (LEMAIRE) ಎಂಬುವವರು ಗಾಯಗಳಿಗೆ ಸವರಿ ವಿಫಲರಾಗಿದ್ದಾರೆ; ಅದನ್ನೇ ಯುವ ಶಸ್ತ್ರ ವೈದ್ಯ ಲಿಸ್ಟರ್, ತಾನು ಹೊಸದಾಗಿ ಮಾಡುತ್ತಿರುವುದಾಗಿ ಹೇಳುತ್ತಿರುವುದು ಅವಮಾನಕರವಲ್ಲವೇ ಎಂದು ಹೀಯಾಳಿಸಿದರು. ಗಾಯಗಳಲ್ಲಿನ ರಕ್ತಸ್ರಾವವನ್ನು ನಿಲ್ಲಿಸಲು ದಾರದ ಬದಲು

ತಾನು ಬಳಕೆಗೆ ತಂದಿರುವ ಲೋಹದ ಕ್ಲಿಪ್‌ಗಳನ್ನು ಬಳಸುವುದರಿಂದ ಕೀವಾಗುವುದನ್ನು ಸಂಪೂರ್ಣವಾಗಿ ತಡೆಯಬಹುದೆಂದು ಒತ್ತಿ ಹೇಳುವುದನ್ನು ಸಿಂಪ್ಸನ್ ಮರೆಯಲಿಲ್ಲ. ಈಗಿರುವ ಹಳೆಯ ಆಸ್ಪತ್ರೆಗಳನೆಲ್ಲಾ ಕೆಡವಿ ಸುಟ್ಟು ನೆಲಸಮ ಮಾಡಿ ಹೊಸದಾಗಿ ಕಟ್ಟುವುದರಿಂದಲೂ ಆಸ್ಪತ್ರೆಗಳಲ್ಲಿ ಕೀವಿನ ಸಮಸ್ಯೆಯನ್ನು ಹತೋಟಿಗೆ ತರಬಹುದೆಂಬ ವಿಚಿತ್ರ ವಾದವನ್ನು ಮತ್ತೆ ಮಂಡಿಸಿದರು. ಸಿಂಪ್ಸನ್ ಹಿಂದೆ ಕ್ಲೋರೋಫಾರಂನ್ನು ಅರಿವಳಿಕೆಗಾಗಿ ಬಳಸಲಾರಂಭಿಸಿದಾಗ ತನಗೆ ಎದಿರಾದ ಇಂತಹ ವಿರೋಧಗಳನ್ನು ಮರೆತು ಮಾತನಾಡಿದಂತಿತ್ತು. ಲಿಸ್ಟರ್‌ನ ಮಾವ ಜೇಮ್ಸ್ ಸೈಮ್‌ರೊಡನೆ ಅವನಿಗಿದ್ದ ಗುಪ್ತದ್ವೇಷ ಸಿಂಪ್ಸನ್‌ರ ಈ ತರಹದ ನಡವಳಿಕೆಗೆ ಕಾರಣವಾಗಿದೆಯೆಂಬುದು ಆ ದಿನ ಸ್ಪಷ್ಟವಾಗಿ ಕಾಣುತ್ತಿತ್ತು.

ಲಿಸ್ಟರ್, ಲ್ಯಾನ್ಸೆಟ್ ಪತ್ರಿಕೆಯಲ್ಲಿ ಪ್ರಕಟಿಸಿದ್ದ ಲೇಖನವನ್ನು ಅಭ್ಯಸಿಸಿ, ತಮ್ಮ ಆಸ್ಪತ್ರೆಗಳಲ್ಲಿ ಬಳಕೆಗೆ ತಂದಿದ್ದ ಯೂರೋಪಿನ ಕೆಲವು ಯುವವೈದ್ಯರು ಆ ದಿನ ಹಾಜರಿದ್ದರು. ಅವರು ತಮಗೆ ದೊರೆತ ಒಳ್ಳೆಯ ಫಲಿತಾಂಶಗಳನ್ನು ಹೇಳಲು ಪ್ರಯತ್ನಿಸಿದಾಗ, ಸಿಂಪ್ಸನ್‌ನ ಬಾಲಬಡುಕರು ಗಲಾಟೆಯೆಬ್ಬಿಸಿ ಅವರ ಮಾತುಗಳು ಕೇಳದಂತೆ ಮಾಡಿದರು. ಮತ್ತೆ ಕೆಲವರು ಸಿಂಪ್ಸನ್‌ನ ವಾದಗಳನ್ನು ಸಮರ್ಥಿಸಿ ಮಾತನಾಡಿದರು.

ಲಿಸ್ಟರ್‌ಗೆ ದೊರೆತ ನಿರಾಶಾದಾಯಕ ಪ್ರತಿಕ್ರಿಯೆಗೆ ಮರುಕಗೊಂಡವರೂ ಅಲ್ಲಿದ್ದರು. ಅವರಲ್ಲನೇಕರು ಸಮ್ಮೇಳನದ ನಂತರ ಅವನನ್ನು ಭೇಟಿ ಮಾಡಿ ತಮ್ಮ ಸಹಾನುಭೂತಿ ಮತ್ತು ಬೆಂಬಲವನ್ನು ವ್ಯಕ್ತಪಡಿಸಿದರು. ತಮ್ಮ ಆಸ್ಪತ್ರೆಗಳಲ್ಲಿ ಆಂಟಿಸೆಪ್ಟಿಕ್ ನಿಯಮಗಳನ್ನು ಇನ್ನೂ ಕಟ್ಟುನಿಟ್ಟಾಗಿ ಅನುಸರಿಸುವ ಭರವಸೆಯಿತ್ತರು.

ಡಬ್ಲಿನ್ ಸಮ್ಮೇಳನ ಮುಗಿದ ನಂತರವೂ ವೈದ್ಯಕೀಯ ಪತ್ರಿಕೆಗಳೇ ಅಲ್ಲದೆ, ವರ್ತಮಾನ ಪತ್ರಿಕೆಗಳಲ್ಲೂ ಆಂಟಿಸೆಪ್ಟಿಕ್ ನಿಯಮಗಳ ಮೇಲೆ ವಾದ ವಿವಾದಗಳು ಪ್ರಕಟವಾದವು. ಬಹುಪಾಲು ಲೇಖಕರು ಗಾಯಗಳಿಗೆ ಕಾರ್ಬಾಲಿಕ್ ಆಮ್ಲದ ಲೇಪನದ ಕಡೆಗೇ ಹೆಚ್ಚಿನ ಗಮನ ಕೊಟ್ಟು ಬರೆಯುತ್ತಿದ್ದರು. ಲಿಸ್ಟರ್ ಒತ್ತಿ ಹೇಳುತ್ತಿದ್ದ ಶುಚಿತ್ವದ ನಿಯಮಗಳ ಆಚರಣೆ, ಸಲಕರಣೆಗಳನ್ನು ನೀರಿನಲ್ಲಿ

ಕುದಿಸುವುದು ಮುಂತಾದ ಆಂಟಿಸೆಪ್ಟಿಕ್ ನಿಯಮಗಳನ್ನು ತಮ್ಮ ಗಮನಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ. ತಮ್ಮ ಪ್ರಯೋಗಗಳಲ್ಲಿ ಅವುಗಳಿಗೆ ಪ್ರಾಧಾನ್ಯತೆ ನೀಡುತ್ತಲೂ ಇರಲಿಲ್ಲ. ಈ ವ್ಯತ್ಯಾಸಗಳ ಬಗೆಗೆ ಲಿಸ್ಟರ್ ಆಗಾಗ್ಗೆ ಪ್ರತ್ರಿಕೆಗಳಲ್ಲಿ ಮಾರುತ್ತರ ನೀಡುತ್ತಿದ್ದರೂ, ಬಹುಪಾಲು ಜನ ಅವನ್ನು ಗಮನಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ.

ಈ ಸಮಯದಲ್ಲಿ ಎಡಿನ್ ಬರೋದ 'ಡೈಲಿ ರಿವ್ಯೂ' (DAILY REVIEW) ಪತ್ರಿಕೆಯಲ್ಲಿ ವಿಚಿತ್ರ ಲೇಖನ ಮಾಲೆಯೊಂದು ಆರಂಭವಾಯಿತು. ತನ್ನ ನಿಜವಾದ ಹೆಸರನ್ನು ಬಳಸದೆ, ಲೇಖಕ 'ಚಿರುರ್ಜಿಕಸ್' (CHIRURGICUS) ಎಂಬ ಗುಪ್ತನಾಮದಿಂದ ಲೇಖನ ಬರೆಯುತ್ತಿದ್ದ ! ಸೆಪ್ಟೆಂಬರ್ 21 ರ ಸಂಚಿಕೆಯಲ್ಲಿ ಮೊದಲ ಲೇಖನ ಪ್ರಕಟವಾಗಿತ್ತು. ಅದರಲ್ಲಿ ಜೋಸೆಫ್ ಲಿಸ್ಟರ್ ಫ್ರಾನ್ಸಿನ ಜೂಲ್ಸ್ ಫ್ರಾಂಕೋಯಿಸ್ ಲಿಮ್ಮೈರೇ ಅವರ ಸಂಶೋಧನಾ ಫಲಿತಾಂಶಗಳನ್ನು ಕದ್ದು ಕೃತಿ ಚೌರ್ಯ ಮಾಡಿರುವ ಆಪಾದನೆ ಮಾಡಲಾಗಿತ್ತು. ಲಿಮ್ಮೈರೆ 1863 ರಲ್ಲಿ ಪ್ರಕಟಿಸಿದ ಪುಸ್ತಕದಲ್ಲಿ ಗಾಯಗಳಿಗೆ ಕಾರ್ಬಾಲಿಕ್ ಆಮ್ಲವನ್ನು ಲೇಪಿಸುವುದರ ವಿವರಣೆ ನೀಡಿದ್ದರು. ಕೆಲವು ವರ್ಷಗಳು ಈ ಪ್ರಯೋಗ ನಡೆಸಿದರೂ ಒಳ್ಳೆಯ ಫಲಿತಾಂಶಗಳು ಲಭಿಸಿರಲಿಲ್ಲ. ಅವನ ತತ್ವಗಳನ್ನು ಆಚರಣೆಗೆ ತಂದ ಇತರರಿಗೂ ಅದರಿಂದ ಉತ್ತಮ ಪರಿಣಾಮಗಳು ದೊರೆತಿರಲಿಲ್ಲ. ಲಿಮ್ಮೈರೆ ಪ್ರಕಟಿಸಿದ 700 ಪುಟಗಳ ಪುಸ್ತಕ ತನ್ನ ಹತ್ತಿರ ಇರುವುದಾಗಿಯೂ ಈಗ ಲಿಸ್ಟರ್ ತಾನು ಕಂಡು ಹಿಡಿದಿರುವುನೆಂದು ಹೇಳಿಕೊಳ್ಳುತ್ತಿರುವ ಅಂಶಗಳನ್ನು ಲಿಮ್ಮೈರೇ ಆಗಲೇ ಊಹಿಸಿ ಬರೆದಿದ್ದಾನೆಂದೂ ಸಹ ಬರೆಯಲಾಗಿತ್ತು.

ಡೈಲಿ ರಿವ್ಯೂ ಪತ್ರಿಕೆಯಲ್ಲಿ ಗುಪ್ತನಾಮದಿಂದ ಬರೆದ ಲೇಖನದ ವಿಷಯಗಳನ್ನೊಳಗೊಂಡ ವಿಷಯಗಳು ಕರಪತ್ರವೊಂದರಲ್ಲಿ ಜೇಮ್ಸ್ ಸಿಂಪ್ಸನ್‌ರ ಹೆಸರಿನಲ್ಲಿ ಹೊರಬಂದು, ಬಹುಪಾಲು ವೈದ್ಯರಿಗೆ ಹಂಚಲ್ಪಟ್ಟಿದ್ದವು. ಲಿಸ್ಟರ್‌ನ ಸಹಾಯಕ ಸೇಕರಿಗೂ ಈ ಕರಪತ್ರಗಳು ತಲುಪಿದ್ದವು. ಈಗ ಡೈಲಿ ರಿವ್ಯೂನಲ್ಲಿ ಗುಪ್ತನಾಮದಿಂದ ಬರೆಯುತ್ತಿದ್ದುದು ಜೇಮ್ಸ್ ಸಿಂಪ್ಸನ್‌ರೇ ಎಂಬುದರಲ್ಲಿ ಯಾವ ಅನುಮಾನವೂ ಉಳಿಯಲಿಲ್ಲ. ಅಂತಹ ಒಂದು ಸುತ್ತೋಲೆ ಲ್ಯಾನ್ಸೆಟ್ ಪತ್ರಿಕೆಯವರಿಗೂ ದೊರೆತಿದ್ದು ಅದರಲ್ಲೂ ಪ್ರಕಟವಾಗಿತ್ತು.

ಆತನಕ ಲಿಸ್ಟರ್, ಲಿಮ್ಮೈರೇ ಅವರ ಹೆಸರನ್ನೇ ಕೇಳಿರಲಿಲ್ಲ. ಇನ್ನು ಅದನ್ನು ಓದುವುದು ಹೇಗೆ ಸಾಧ್ಯವಾದೀತು. ಅದರ ಪ್ರತಿಗಳಿಗಾಗಿ ಬಹಳ ಕಡೆ ಪ್ರಯತ್ನಿಸಿದ. ಎಡಿನ್‌ಬರೋ ವಿಶ್ವವಿದ್ಯಾಲಯದ ಪುಸ್ತಕ ಭಂಡಾರದಲ್ಲಿ ಅದರ ಒಂದು ಪ್ರತಿ ದೊರೆಯಿತು. ಅದನ್ನು ತರಿಸಿಕೊಂಡು ಆಮೂಲಾಗ್ರವಾಗಿ ಲಿಸ್ಟರ್ ಅಭ್ಯಸಿಸಿದ. ಫ್ರೆಂಚ್ ಗ್ರಂಥಿಗೆ ವೈದ್ಯ (APOTHECARY) ಲಿಮ್ಮೈರೇ, ಕೋಲ್ ಟಾರ್‌ನಿಂದ ಕಾರ್ಬಾಲಿಕ್ ಆಮ್ಲವನ್ನು ಪ್ರತ್ಯೇಕಿಸುವಲ್ಲಿ ಯಶಸ್ಸು ಪಡೆದ ಉಲ್ಲೇಖವಿತ್ತು. ಕೆಲವರ ಗಾಯಗಳಿಗೆ ಅದನ್ನು ಲೇಪಿಸಿ ಒಂದೆರಡು ಸಂದರ್ಭಗಳಲ್ಲಿ ಒಳ್ಳೆಯ ಫಲಿತಾಂಶಗಳನ್ನು ಪಡೆದಿದ್ದನೆನ್ನಬಹುದಾದರೂ, ಬಹಳಷ್ಟು ಪ್ರಕರಣಗಳಲ್ಲಿ ಅದರಿಂದ ಒಳ್ಳೆಯ ಪರಿಣಾಮಗಳು ಲಭಿಸಿರಲಿಲ್ಲ. ಈಗ ಲಿಸ್ಟರ್ ನಿರೂಪಿಸಿರುವಂಥ ಆಂಟಿಸೆಪ್ಟಿಕ್ ನಿಯಮಗಳ ಪಾಲನೆ ಆಗಿರದಿದ್ದುದರಿಂದ ಎಲ್ಲಾ ಸಂದರ್ಭಗಳಲ್ಲಿ ಅದರಿಂದ ಒಳ್ಳೆಯದಾಗಿರಲಿಲ್ಲ. ಆದುದರಿಂದ ಆ ಪ್ರಯೋಗಗಳು ಮುಂದುವರಿಯಲಿಲ್ಲ. ಹೆಚ್ಚೆಂದರೆ ಗಾಯಗಳಲ್ಲಿ ಹರಿದಾಡುತ್ತಿದ್ದ ಅತಿ ಸಣ್ಣ ಹುಳ ಹುಪ್ಪಟೆಗಳು ಸತ್ತಿದ್ದನ್ನು ಗಮನಿಸಿದ ಲಿಮ್ಮೈರೇ ಕಾರ್ಬಾಲಿಕ್ ಆಮ್ಲದ ಲೇಪನದಿಂದ ಗಾಯಗಳನ್ನು ವಾಸಿಮಾಡಬಹುದೆಂಬ ಆಶಾಭಾವನೆಯನ್ನು ವ್ಯಕ್ತಪಡಿಸಿದ್ದ. ಲಿಸ್ಟರ್ ಅನಂತರ ಲೇಖನವೊಂದನ್ನು ಬರೆದು ಲ್ಯಾನ್ಸೆಟ್ ಪತ್ರಿಕೆಗೆ ಕಳುಹಿಸಿದ; ಲಿಮ್ಮೈರೆಯ ಪುಸ್ತಕದಲ್ಲಿದ್ದ ಮೇಲಿನ ವಿಷಯಗಳನ್ನು ಉಲ್ಲೇಖಿಸಿದ್ದ. ಅದೇ ಮೊದಲ ಬಾರಿಗೆ ತಾನು ಆ ಪುಸ್ತಕವನ್ನು ಓದುವ ಅವಕಾಶ ದೊರೆತಿದ್ದರಿಂದ ಲಿಮ್ಮೈರೆಯವರ ಕೃತಿಚೌರ್ಯದ ಆಪಾದನೆ ತನಗೆ ಸಲ್ಲುವುದಿಲ್ಲ; ಮೇಲಾಗಿ ಕಾರ್ಬಾಲಿಕ್ ಆಮ್ಲವನ್ನು ಮೊಟ್ಟ ಮೊದಲು ಬಳಸಿಕೊಂಡಿದ್ದರ ಬಗೆಗೆ ಆದ್ಯತೆಯನ್ನು ಸ್ಥಾಪಿಸಲು ತಾನು ಪ್ರಯತ್ನಿಸುತಿಲ್ಲ; ಗಾಯಗಳಲ್ಲಿರಬಹುದಾದ ಸೂಕ್ಷ್ಮ ಜೀವಾಣುಗಳ ನಾಶಕ್ಕೆ ಕಾರ್ಬಾಲಿಕ್ ಆಮ್ಲವನ್ನು ಲೇಪಿಸುವುದು ಮಾತ್ರವಲ್ಲದೆ, ಅವುಗಳಿಗೆ ಮತ್ತೆ ಜೀವಾಣು ಸೇರದಂತೆ, ಗಾಯಗಳ ಚಿಕಿತ್ಸೆಗೆ ಬಳಸುವ ಬಟ್ಟೆ, ಬರೆ, ಮತ್ತಿತರ ಸಲಕರಣೆಗಳನ್ನೂ ಸಹ ಶುಚಿಗೊಳಿಸಬೇಕಾದ ಅವಶ್ಯಕತೆಯನ್ನು ಪ್ರತಿಪಾದಿಸುವುದೂ ಸಹಾ ಮುಖ್ಯ ಉದ್ದೇಶವಾಗಿದೆ; ಬರೇ ಕಾರ್ಬಾಲಿಕ್ ಆಮ್ಲ ಲೇಪಿಸಿ ಅದರಿಂದ ಉತ್ತಮ ಫಲಿತಾಂಶಗಳನ್ನು ನಿರೀಕ್ಷಿಸಲಾಗದು; ಅಂತಹ ಪ್ರಯತ್ನಗಳಿಂದುಂಟಾಗಬಹುದಾದ ಕೆಟ್ಟ ಪರಿಣಾಮಗಳ ಬಗೆಗೂ ಎಚ್ಚರಿಕೆಯ ಮಾತುಗಳನ್ನು ಆ ಲೇಖನದಲ್ಲಿ ಸೇರಿಸಿದ್ದ.

ಲ್ಯಾನ್ಸೆಟ್ ಪತ್ರಿಕೆಯ ಅಕ್ಟೋಬರ್ 19ರ (1867) ಸಂಚಿಕೆಯಲ್ಲಿ ಆ ಪತ್ರ ಪ್ರಕಟವಾಯಿತು. ಸಿಂಪ್ಸನ್‌ನ ಅನಾಮಧೇಯತನ ಈಗಾಗಲೇ ಬಹಿರಂಗವಾಗಿದ್ದುದರಿಂದ ತನ್ನ ನಿಜನಾಮದಿಂದಲೇ ಪತ್ರ ವ್ಯವಹಾರಕ್ಕಿಳಿಯುವುದು ಅನಿವಾರ್ಯವಾಯಿತು. ಮುಂದಿನ ಎರಡೇ ದಿನಗಳಲ್ಲಿ ಶಸ್ತ್ರ ಚಿಕಿತ್ಸೆಗಳಲ್ಲಿ "ಕಾರ್ಬಾಲಿಕ್ ಆಮ್ಲ ಮತ್ತು ಸಂಯುಕ್ತಗಳ ಬಳಕೆ" ಎಂಬ ವಿವಾದಾತ್ಮಕ ಲೇಖನ ಲ್ಯಾನ್ಸೆಟ್‌ನ ಹಲವು ಪುಟಗಳನ್ನು ಆವರಿಸಿಕೊಂಡು, ಜೇಮ್ಸ್ ಸಿಂಪ್ಸನ್‌ನ ಹೆಸರಿನಲ್ಲೇ ಪ್ರಕಟವಾಯಿತು. ಲಿಮ್ಮೈರೇಯ ನಂತರ ಇತರ ಹಲವು ಶಸ್ತ್ರವೈದ್ಯರೂ ಸಹಾ ಕಾರ್ಬಾಲಿಕ್ ಆಮ್ಲವನ್ನು ಗಾಯಗಳಿಗೆ ಲೇಪಿಸುತ್ತಿದ್ದರು. ಅವರಿಗೂ ಒಳ್ಳೆಯ ಫಲಿತಾಂಶಗಳು ದೊರೆತಿರಲಿಲ್ಲ. ಅವರಿಗೂ ಲೇಖನದಲ್ಲಿ ಸಾಕಷ್ಟು ಛೀಮಾರಿಗಳಿದ್ದವು. ಗಾಯಗಳಲ್ಲಿ ಕೀವಾಗುವುದನ್ನು ತಡೆಯಲು ರಕ್ತಸ್ರಾವನನ್ನು ತಡೆಯಲು ಬಳಸುತ್ತಿರುವ ದಾರಗಳ ಬದಲು ತಾನು ಜಾರಿಗೆ ತಂದಿದ್ದ ಲೋಹದ ಕ್ಲಿಪ್‌ಗಳನ್ನು ಬಳಸುವುದು ಮತ್ತು ರಕ್ತಸ್ರಾವವನ್ನು ಕಡಿಮೆ ಮಾಡಲು ಒತ್ತಡವನ್ನುಂಟು ಮಾಡುವ ವಿಧಾನ – ಆಕ್ಯುಪ್ರೆಸರ್ (ACUPRESSURE) ಗಳನ್ನು ಅನುಸರಿಸುವುದೊಂದೇ ಮಾರ್ಗವೆಂದು ವಾದಿಸಿದ್ದರು. ಅಬರ್ಡೀನ್‌ನ ಶಸ್ತ್ರವೈದ್ಯ ಪಿರ್ರೇ ಎಂಬುವವರು ಈ ವಿಧಾನಗಳನ್ನು ಅನುಸರಿಸಿ ಒಳ್ಳೆಯ ಫಲಿತಾಂಶಗಳನ್ನು ಪಡೆದಿರುವುದನ್ನು ಉಲ್ಲೇಖಿಸಿದ್ದ. ಲಿಸ್ಟರ್ ಮತ್ತು ಅವನ ಬೆಂಬಲಿಗರು ಈ ವಿಧಾನಗಳನ್ನು ಅನುಸರಿಸಿಬಾರದೇಕೆ ಎಂದು ಪ್ರಶ್ನಿಸಿದ್ದರು. ಆ ಕಾಲದ ಇನ್ನೊಬ್ಬ ಹೆಸರಾಂತ ಶಸ್ತ್ರ ವೈದ್ಯ ಲಿಸ್ಟರ್‌ನ ವಿಧಾನಗಳನ್ನು ಅನುಸರಿಸಿದ್ದರೂ ತಮಗೆ ಅದರಿಂದ ಉತ್ತಮ ಫಲಿತಾಂಶಗಳು ದೊರೆಯಲಿಲ್ಲವೆಂದು ಸಿಂಪ್ಸನ್‌ನನ್ನು ಬೆಂಬಲಿಸಿ ಬರೆದಿದ್ದ ಪತ್ರ ಮುಂದೆ ಲ್ಯಾನ್ಸೆಟ್‌ನಲ್ಲಿ ಪ್ರಕಟವಾಯಿತು.

ಸಿಂಪ್ಸನ್‌ರ ದೀರ್ಘ ಹಾಗೂ ಅತ್ಯಂತ ಕಠಿಣ ಶೈಲಿಯಲ್ಲಿ ಬರೆದ ಪತ್ರಕ್ಕೆ ಲಿಸ್ಟರ್ ಸೌಮ್ಯ ರೀತಿಯಲ್ಲಿ ಆದರೂ ಮನದಟ್ಟಾಗುವ ಹಾಗೆ ಹಲವು ಲೇಖನಗಳನ್ನು ಧಾರಾವಾಹಿಯಾಗಿ ಲ್ಯಾನ್ಸೆಟ್‌ನಲ್ಲಿ ಪ್ರಕಟಿಸಿದನು. ಅವುಗಳಲ್ಲಿ ತಾನು ನಿರೂಪಿಸುತ್ತಿರುವ ಆಂಟಿಸೆಪ್ಟಿಕ್ ನಿಯಮಗಳ ಹಿಂದಿನ ತತ್ವಗಳ ವಿವರಣೆ ಮತ್ತು ಅವುಗಳನ್ನು ಅನುಸರಿಸುವ ವಿಧಾನಗಳನ್ನ ದೀರ್ಘವಾಗಿ ವಿವರಿಸಿದ್ದನು.

ಸಿಂಪ್ಸನ್ ಬಗೆಗೆ ವೈಯಕ್ತಿಕ ದೋಷಾರೋಪಣೆ ಮಾಡದೆ, ವಿಷಯಕ್ಕೆ ಸಂಬಂಧಿಸಿದಂತೆ ಹಿತಮಿತವಾದ ಭಾಷೆಯಲ್ಲಿ ತನ್ನ ವಾದಗಳನ್ನ ಮಂಡಿಸಿರುತ್ತಿದ್ದ.

ಆದರೂ ಬ್ರಿಟನ್ನಿನ ವೈದ್ಯ ಸಮೂಹ ಲಿಸ್ಟರ್‌ನ ವಾದಗಳನ್ನು ಅಷ್ಟಾಗಿ ಗಮನಕ್ಕೆ ತೆಗೆದುಕೊಂಡಂತಿರಲಿಲ್ಲ. ಆಂಟಿಸೆಪ್ಟಿಕ್ ತತ್ವಗಳ ಪರ ಹಾಗೂ ವಿರೋಧವಾಗಿ ಪತ್ರಗಳು ಪ್ರಕಟವಾಗುತ್ತಲೇ ಇರುತ್ತಿದ್ದವು. ಆ ಕಾಲದ ವೈದ್ಯಕೀಯ ಕ್ಷೇತ್ರ ಕಾರ್ಬಾಲಿಕ್ ಆಮ್ಲ ಮತ್ತು ಅದಕ್ಕೆ ಸಂಬಂಧಿಸಿದ ವಾಗ್ವಾದಗಳಲ್ಲಿ (CARBOLIC ACID AND CONTROVERCY) ಮುಳುಗಿಹೋಗಿತ್ತು ಎನ್ನಲಾಗಿದೆ. ಸಿಂಪ್ಸನ್ 1870 ರಲ್ಲಿ ಗತಿಸಿದ ನಂತರವೂ ಅವನ ಬಾಲಬಡುಕರು ಲಿಸ್ಟರ್‌ನ ಮೇಲೆ ತಮ್ಮ ದ್ವೇಷವನ್ನು ಮುಂದುವರಿಸುತ್ತಲೇ ಇದ್ದರು. ಲ್ಯಾನ್ಸೆಟ್ ಪತ್ರಿಕೆಯೂ 1873 ರ ಸಮಯದಲ್ಲಿ ಪ್ಯಾಶ್ಚರ್ ಮತ್ತು ಲಿಸ್ಟರ್‌ರ ತತ್ವಗಳು ವೈಜ್ಞಾನಿಕವಾಗಿಲ್ಲವೆಂದು ಟೀಕೆ ಮಾಡುತ್ತಲೇ ಇತ್ತು. ವಿಪರ್ಯಾಸದ ಸಂಗತಿಯೆಂದರೆ, ಇಂಗ್ಲೆಂಡಿನ ಶಸ್ತ್ರ ವೈದ್ಯರು ಮತ್ತು ವೈದ್ಯ ವಿದ್ಯಾರ್ಥಿಗಳು ಲಿಸ್ಟರ್‌ನ ಮಿಣಿಜೀವಿಗಳ ಬಗೆಗೆ ವಿಡಂಬನಾತ್ಮಕ ಹಾಸ್ಯ ಚಟಾಕಿಗಳನ್ನು ರಚಿಸಿ ಹಾಡುತ್ತಿದ್ದರೆ, ಅಸಂಖ್ಯಾತ ರೋಗಿಗಳು ಆಸ್ಪತ್ರೆಗಳಲ್ಲಿ ನಂಜಿನ ಜ್ವರದಿಂದ ನರಳಿ, ಕೂಗಾಡಿ ಯಮಲೋಕವನ್ನು ಸೇರುತ್ತಲೇ ಇದ್ದುದು!

ಇಂಗ್ಲೆಂಡಿನ ಬಹುಪಾಲು ಶಸ್ತ್ರವೈದ್ಯರು ಲಿಸ್ಟರ್ ಮತ್ತು ಅವನ ತತ್ವಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಅವನ ವಿರುದ್ಧ ತಮ್ಮ ಪ್ರಹಾರವನ್ನು ಮುಂದುವರಿಸುತ್ತಿದ್ದರೂ, ತಾನು ನಿರೂಪಿಸುತ್ತಿರುವ ತತ್ವಗಳಲ್ಲಿ ನಂಬಿಕೆ ಇದ್ದ ಲಿಸ್ಟರ್ ಎಂದಿನ ಉತ್ಸಾಹದಿಂದ ತನ್ನ ಪ್ರಯೋಗವನ್ನು ಮುಂದುವರಿಸುತ್ತಲೇ ಇದ್ದ. ಅವನ ವಿರುದ್ಧ ಸಾಕಷ್ಟು ಅಡೆತಡೆಗಳಿದ್ದರೂ ಮನಃಸ್ಥೈರ್ಯವನ್ನು ಕಳೆದುಕೊಳ್ಳದೇ, ಗಾಯಗಳ ಚಿಕಿತ್ಸೆಗೆ ಕಾರ್ಬಾಲಿಕ್ ಆಮ್ಲ ಲೇಪಿಸುವುದು ಮತ್ತು ಆಂಟಿಸೆಪ್ಟಿಕ್ ನಿಯಮಗಳನ್ನು ಇನ್ನೂ ಹೆಚ್ಚುಹೆಚ್ಚು ಪ್ರಕರಣಗಳಲ್ಲಿ ಮುಂದುವರಿಸುತ್ತಲೇ ಪ್ರಸ್ತುತ ಸಮಯದಲ್ಲಿ ಅವಲೋಕಿಸಿದರೆ ಲಿಸ್ಟರ್ ಎದುರಿಸುತ್ತಿದ್ದ ಸಮಸ್ಯೆಗಳು ಅಷ್ಟೇನೂ ಜಟಿಲವಾದವೆಂದು ಹೇಳಲಾಗದು. ಆದರೆ ಈಗಿನ ಪರಿಸ್ಥಿತಿಯಲ್ಲಿ, ಅವನು ಹಲವು ಪ್ರತಿಕೂಲ ಸನ್ನಿವೇಶಗಳನ್ನು ಪ್ರತಿದಿನ ಎದುರಿಸಬೇಕಿತ್ತು. ಮನುಕುಲದ ಕಡುವೈರಿಗಳಾಗಿದ್ದ ಅಗೋಚರ ಮಿಣಿಜೀವಿಗಳ ವಿರುದ್ಧ ಎಡವುತ್ತಾ ಬೀಳುತ್ತಾ ಲಿಸ್ಟರ್ ತನ್ನ ಹೋರಾಟವನ್ನು ಮುಂದುವರಿಸುತ್ತಿದ್ದುದು ಒಂದು ಪವಾಡವೆಂದೇ ಹೇಳಬೇಕು. ಅದೃಷ್ಟವಶಾತ್ ಅವನ ಪ್ರಯೋಗಗಳಿಂದ ದಿನೇ ದಿನೇ ಫಲಿತಾಂಶಗಳು ದೊರೆಯುತ್ತಿದ್ದುದು ಒಂದು ಆಶಾಕಿರಣವಾಗಿತ್ತು.

ಶಸ್ತ್ರಚಿಕಿತ್ಸೆಯ ಸಮಯದಲ್ಲಿ ಉಂಟಾಗುತ್ತಿದ್ದ ರಕ್ತಸ್ರಾವವನ್ನು ನಿಲ್ಲಿಸಲು, ರಕ್ತನಾಳಗಳನ್ನು ದಾರಗಳಿಂದ ಬಿಗಿಯಾಗಿ ಕಟ್ಟುತ್ತಿದ್ದರು. ದಾರಗಳು ಸಾಮಾನ್ಯವಾಗಿ ಕರಗಿ ಹೋಗುತ್ತಿರಲಿಲ್ಲವಾದುದರಿಂದ ಅವುಗಳ ತುದಿಗಳನ್ನು ಉದ್ದವಾಗಿರಿಸಿ, ಗಾಯದ ಮೂಲಕ ಹೊರಗೆ ಕಾಣಿಸುವಂತೆ ಬಿಟ್ಟಿದ್ದರು. ಮುಂದೆ ಗಾಯ ವಾಸಿಯಾದ ನಂತರ ಅವು ಸಡಿಲವಾಗಿ ಹೊರಗೆ ಬರುತ್ತಿದ್ದವು. ಗಾಯಗಳಲ್ಲಿ ಕೀವು ಉತ್ಪಾದನೆಯಾಗುವುದಕ್ಕೂ ಅವೇ ಪ್ರಮುಖ ಕಾರಣಗಳಾಗುತ್ತಿದ್ದುದು ಸರ್ವೇಸಾಮಾನ್ಯವೇ ಆಗಿತ್ತು. ಅಂತಹ ದಾರಗಳ ಬದಲು ದೇಹದ ಒಳಗೇ ಉಳಿದುಕೊಂಡು ಕರಗಿ ಹೋಗುವಂತಹ ದಾರಗಳ ಶೋಧನೆ ಲಿಸ್ಟರ್‌ನ ಮುಂದಿನ ಯೋಜನೆಯಾಯಿತು. ಪ್ರಾಣಿಗಳ ಕರುಳಿನ ಒಂದು ಭಾಗದ ಅಂಗಾಂಶದಿಂದ ತಯಾರಿಸಿದ ದಾರ 'ಕ್ಯಾಟ್‌ಗಟ್' (CAT GUT ) ಆ ಸಲುವಾಗಿ ಬಳಕೆಯಾಗುತ್ತಿತ್ತು. ಅವು ಕೇವಲ ಒಂದೇ ವಾರದಲ್ಲಿ ಕರಗಿ ಹೋಗುತ್ತಿದ್ದುದರಿಂದ ಮತ್ತೆ ರಕ್ತಸ್ರಾವ ಆರಂಭವಾಗುವ ಅಪಾಯವೂ ಇತ್ತು. ಅದಕ್ಕಿಂತ ಅವು ಪರಿಶುದ್ಧವಾಗಿರುತ್ತಿರಲಿಲ್ಲವಾದುದರಿಂದ ಗಾಯಗಳಲ್ಲಿ ನಂಜಾಗಿ ಕೀವಾಗುವುದಕ್ಕೂ ಒತ್ತು ಕೊಟ್ಟಂತಾಗುತ್ತಿತ್ತು. ತಂದೆ ತಾಯಿಗಳ ಜತೆ ಕ್ರಿಸ್‌ಮಸ್ ರಜೆಯನ್ನು ಕಳೆಯಲು 1886 ರಲ್ಲಿ ಲಿಸ್ಟರ್ ದಂಪತಿಗಳು ಅವರ ಊರಿಗೆ ತೆರಳಿದ್ದರು. ಲಿಸ್ಟರ್ ಆಗಲೂ ಸುಮ್ಮನೆ ಕಾಲಹರಣ ಮಾಡಲಿಲ್ಲ. ಕ್ಯಾಟ್‌ಗಟ್‌ನ್ನು ಕೆಲಸಮಯ ಕಾರ್ಬಾಲಿಕ್ ಆಮ್ಲದಲ್ಲಿ ತೋಯಿಸಿ ಇಡುವುದರಿಂದ ಕೀವಾಗುವುದನ್ನು ತಡೆಯಬಹುದೇ ಎಂದು ಯೋಚಿಸಿದ. ಹಸುವಿನ ಕರುವೊಂದನ್ನು ಅರಿವಳಿಕೆಗೊಳಪಡಿಸಿ, ಅದರ ಕೆಲವು ರಕ್ತನಾಳಗಳನ್ನು ತೆರೆದು ಕಾರ್ಬಾಲಿಕ್ ಆಮ್ಲದಲ್ಲಿ ತೋಯಿಸಿದ ಕ್ಯಾಟ್‌ಗಟ್‌ನ್ನು ರಕ್ತನಾಳಗಳಿಗೆ ಕಟ್ಟಿದನು. ಒಂದು ತಿಂಗಳ ನಂತರ ಕ್ಯಾಟ್‌ಗಟ್‌ನ್ನು ಬಳಸಿದ ಜಾಗಗಳನ್ನು ತೆರೆದು ಪರೀಕ್ಷಿಸಿದಾಗ, ಅಲ್ಲಿ ಕೀವಾದ ಯಾವ ಚಿಹ್ನೆಗಳೂ ಇರಲಿಲ್ಲ. ಕ್ಯಾಟ್‌ಗಟ್ ಅಷ್ಟರೊಳಗೆ ಕರಗಿ ಹೋಗಿದ್ದವು. ಅಂದಿನಿಂದ ಈ ತರಹದ ಕ್ಯಾಟ್‌ಗಟ್‌ನ ಬಳಕೆ ವ್ಯಾಪಕವಾಗಿ ಜರುಗುತ್ತಿದೆ.

## ೯.೧ ಯುರೋಪಿನಲ್ಲಿ ಆಂಟಿಸೆಪ್ಟಿಕ್ ನಿಯಮಗಳ ಆಚರಣೆ

ಜೋಸೆಫ್ ಲಿಸ್ಟರ್ ಮತ್ತು ಅವನ ಆಂಟಿಸೆಪ್ಟಿಕ್ ನಿಯಮಗಳ ಬಗೆಗೆ ಸ್ವದೇಶದಲ್ಲಿ ದ್ವೇಷ ಮತ್ತು ನಿರ್ಲಕ್ಷ್ಯದ ವಾತಾವರಣ ಇದ್ದರೂ, ಕೆಲವು ಹೊರ

ದೇಶಗಳಲ್ಲಿ ಅವನ ತತ್ವಗಳನ್ನು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದ ಅನೇಕರಿದ್ದರು. ತೀರಾ ನಿರಾಶಾದಾಯಕ ವಾತಾವರಣದಲ್ಲಿ ಅದು ಹೊಂಗಿರಣದಂತಿತ್ತು. ಅವರ ಒಳ್ಳೆಯ ಫಲಿತಾಂಶಗಳಿಗೆ ಸ್ವತಃ ಲಿಸ್ಟರ್‌ಗೇ ಪತ್ರಗಳು ಬರುತ್ತಿದ್ದವಲ್ಲದೇ, ವೈದ್ಯಕೀಯ ಪತ್ರಿಕೆಗಳಲ್ಲೂ ವರದಿಗಳು ಪ್ರಕಟವಾಗುತ್ತಿದ್ದವು.

ಚರ್ಮದ ಕಸಿಯ ವಿಧಾನ (SKIN GRAFTING) ವನ್ನು ಜಾರಿಗೆ ತಂದ ಕಾರ್ಲ್‌ಥಿಯರ್‌ಸ್ಟ್ (CARL THIERSCH) ಜರ್ಮನಿಯ ಲಿಪ್‌ಜಿಗ್ ನಗರದಲ್ಲಿ ಹೆಸರಾಂತ ಶಸ್ತ್ರವೈದ್ಯರು. ದೇಹದ ಇನ್ನೊಂದು ಭಾಗದಿಂದ ಚರ್ಮದ ತೆಳುವಾದ ಹಾಳೆಗಳನ್ನು ತೆಗೆದು ಹೊದಿಸುತ್ತಿದ್ದವರಲ್ಲಿ ಅವರೇ ಮೊದಲಿಗರು. ಕೆಲವು ಸಂದರ್ಭಗಳಲ್ಲಿ ಕಸಿಮಾಡಿದ ಜಾಗದಲ್ಲಿಕೀವಾಗಿ ಅವು ನಶಿಸಿ ಹೋಗುತ್ತಿದ್ದವು. ಲಿಸ್ಟರ್ ಲಾನ್ಸೆಟ್ ಪತ್ರಿಕೆಯಲ್ಲಿ (1867) ಪ್ರಕಟಿಸಿದ ಲೇಖನಗಳನ್ನು ಶ್ರದ್ಧೆಯಿಂದ ಅಭ್ಯಸಿಸಿದ್ದರು. ಮುಂದೆ ತಮ್ಮ ಎಲ್ಲಾ ಚರ್ಮ ಕಸಿಯ ಪ್ರಕರಣಗಳಲ್ಲಿ ಲಿಸ್ಟರ್‌ನ ಆಂಟಿಸೆಪ್ಟಿಕ್ ನಿಯಮಗಳನ್ನು ಕಟ್ಟುನಿಟ್ಟಾಗಿ ಆಚರಿಸಲಾರಂಭಿಸಿದರು. ಒಂದಾದ ಮೇಲೊಂದರಂತೆ ಒಳ್ಳೆಯ ಫಲಿತಾಂಶಗಳು ದೊರೆತವು. ಮೂರು ವರ್ಷಗಳ ಕಾಲ ಚರ್ಮದ ಕಸಿಗಳಿಗೇ ಅಲ್ಲದೇ ಅವರು ಕೈಗೊಳ್ಳುತ್ತಿದ್ದ ಇತರ ಶಸ್ತ್ರಚಿಕಿತ್ಸೆಗಳ ಸಂದರ್ಭದಲ್ಲೂ ಆ ನಿಯಮಗಳನ್ನು ಆಚರಿಸಿದರು. ಈ ಎಲ್ಲಾ ಪ್ರಕರಣಗಳಲ್ಲಿ ಕೀವಾಗುವುದು ತೀರಾ ಅಪರೂಪವಾಯಿತು. ''ಆಸ್ಪತ್ರೆ ವ್ಯಾಧಿ'' ಅವರ ಆಸ್ಪತ್ರೆಯಿಂದ ಗಡೀ ಪಾರಾಯಿತೆಂದೇ ಹೇಳಬಹುದು.

ಥಿಯರ್‌ಶ್ಚರ್ ಆಸ್ಪತ್ರೆಯಲ್ಲಿ ಆಂಟಿಸೆಪ್ಟಿಕ್ ನಿಯಮಗಳ ಆಚರಣೆ ಯಿಂದುಂಟಾದ ಒಳ್ಳೆಯ ಪರಿಣಾಮಗಳನ್ನು ನೋಡಿದ ಬರ್ಲಿನ್ ನಗರದ ಅಡಾಲ್ಫ್‌ವಾನ್ ಬಾರ್‌ಡೆಲ್‌ಬೆನ್ ಸಹ ತಮ್ಮ ಶಸ್ತ್ರಚಿಕಿತ್ಸೆಗಳಿಗೆಲ್ಲಾ ಆಂಟಿಸೆಪ್ಟಿಕ್ ನಿಯಮಗಳನ್ನು ಅಳವಡಿಸಿಕೊಂಡರು. ಆ ನಿಯಮಗಳನ್ನು ಸ್ವತಃ ಲಿಸ್ಟರ್ ಆಚರಿಸುವ ರೀತಿನೀತಿಗಳನ್ನು ಪ್ರತ್ಯಕ್ಷವಾಗಿ ನೋಡಿಬರಲು ತನ್ನ ಸಹಾಯಕ ಶೂಲ್ಟ್‌ಜ್‌ನನ್ನು ಗ್ಲಾಸ್ಗೋಗೆ ಕಳುಹಿಸಿದ್ದರು. ಇದರಿಂದ ಬರ್ಲಿನ್ ಆಸ್ಪತ್ರೆಯಲ್ಲಿ ಒಳ್ಳೆಯ ಫಲಿತಾಂಶಗಳು ಬರಲಾರಂಭಿಸಿದವು.

ಜರ್ಮನಿಯ ಹಾಲ್ಲೇ ನಗರದ ಹೆಸರಾಂತ ಹಾಗೂ ಗೌರವಾನ್ವಿತ ಶಸ್ತ್ರವೈದ್ಯ ರಿಚರ್ಡ್‌ವಾನ್ ವೋಲ್ಕಮನ್ ಫ್ರಾಂಕೊ ಪ್ರಶ್ಯಿಯನ್ ಯುದ್ಧದಲ್ಲಿ

ವೈದ್ಯರಾಗಿ ಸೇವೆ ಸಲ್ಲಿಸಿದ್ದವರು. ರಣರಂಗದಲ್ಲಿ ಸೈನಿಕರ ಗಾಯಗಳಿಗಾಗುತ್ತಿದ್ದ ಕೀವು ಮತ್ತು ನಂಜಿನ ಜ್ವರದ ಹಾವಳಿಯನ್ನು ಸ್ವತಃ ನೋಡಿ ಬಹಳಷ್ಟು ನೊಂದುಕೊಂಡಿದ್ದವರು. ಮುಂದೆ ತಮ್ಮ ಊರಿಗೆ ಹಿಂತಿರುಗಿದ ನಂತರವೂ ಹಾಲ್ಲೇಯ ಆಸ್ಪತ್ರೆಯಲ್ಲೂ ಅದೇ ಪರಿಸ್ಥಿತಿ ಇದ್ದುದನ್ನು ನೋಡಬೇಕಾಯಿತು. ಅಲ್ಲಿಯೂ ಬಹುಪಾಲು ಯುದ್ಧದ ಗಾಯಾಳುಗಳೇ ಇರುತ್ತಿದ್ದು, ಗಾಯಗಳಿಂದ ಹರಿಯುತ್ತಿದ್ದ ಕೀವಿನಿಂದ ಅಲ್ಲಿಯ ವಾರ್ಡುಗಳು ದುರ್ಗಂಧಭರಿತ ನರಕದ ಕೂಪಗಳಾಗಿದ್ದವು. ಮನಸ್ಸಿಗೆ ಬೇಸರವಾಗಿ ವೋಲ್ಕಮನ್ ಆಸ್ಪತ್ರೆಯನ್ನೇ ಮುಚ್ಚಿಬಿಡಬೇಕೆಂದು ಮನಸ್ಸು ಮಾಡಿದ್ದರಂತೆ. ಅಷ್ಟರಲ್ಲೇ ಇಂಗ್ಲೆಂಡಿನ ಜೋಸೆಫ್ ಲಿಸ್ಟರ್ ನಿರೂಪಿಸಿದ ಆಂಟಿಸೆಪ್ಟಿಕ್ ನಿಯಮಗಳು ಅವರ ಗಮನಕ್ಕೆ ಬಂದವು. ಆ ವಿಧಾನವನ್ನು ಕಟ್ಟುನಿಟ್ಟಾಗಿ ಆಚರಿಸಲು ಶುರು ಮಾಡಿದರು. ವಿಸ್ಮಯಕರ ಫಲಿತಾಂಶಗಳನ್ನು ಪಡೆದು ಹರ್ಷಿತರಾದರಂತೆ. ಕೀವು ಸುರಿಯುವುದು ಮತ್ತು ನಂಜಿನ ಜ್ವರ ಅವರ ಆಸ್ಪತ್ರೆಯಿಂದ ಮಾಯವಾಯಿತು. ಸಾವುಗಳ ಸಂಖ್ಯೆ ಗಮನಾರ್ಹವಾಗಿ ಇಳಿಮುಖವಾಯಿತು. ವೋಲ್ಕಮನ್ ಲಿಸ್ಟರ್‌ನ ಅತ್ಯಂತ ವಿಧೇಯ ಶಿಷ್ಯರಾದರು. ಆಂಟಿಸೆಪ್ಟಿಕ್ ತತ್ವದ ಪ್ರತಿಪಾದನೆ ಅವರ ಜೀವನದ ಗುರಿಯಾಯಿತು. ಮುಂದೆ ಹಲವಾರು ವೈದ್ಯರು ವೋಲ್ಕ್‌ಮನ್‌ರನ್ನು ಹಿಂಬಾಲಿಸಿದರು.

ಮ್ಯೂನಿಕ್ ನಗರದ ಹೆಸರಾಂತ ಆಸ್ಪತ್ರೆಗೆ ಗಾಯಗಳಾಗಿ ಸೇರಿದ ಶೇಕಡ 80 ರಷ್ಟು ರೋಗಿಗಳು ಸಾಯುವ ಪರಿಸ್ಥಿತಿ ಇತ್ತು. ಅಲ್ಲಿಯ ಆಸ್ಪತ್ರೆಯ ಮುಖ್ಯಸ್ಥರಾದ ಪ್ರೊ. ನಸ್‌ಬಾಮ್, ವೋಲ್ಕಮನ್‌ರಿಗೆ ದೊರೆತ ಒಳ್ಳೆಯ ಫಲಿತಾಂಶಗಳನ್ನು ಕೇಳಿ, ತಮ್ಮಲ್ಲಿಯೂ ಆಂಟಿಸೆಪ್ಟಿಕ್ ನಿಯಮಗಳನ್ನು ಜಾರಿಗೆ ತಂದರು. ಮೊದಲ ವಾರದಲ್ಲೇ ಅತ್ಯಾಶ್ಚರ್ಯಕರ ಫಲಿತಾಂಶಗಳಾದವು. ಮುಂದೆ ಕೀವು ಸುರಿಯುವುದಾಗಲೀ ನಂಜಿನ ಜ್ವರವಾಗಲೀ ಆಸ್ಪತ್ರೆಯಲ್ಲಿ ಕಾಣದಾದವು. ಆಂಟಿಸೆಪ್ಟಿಕ್ ತತ್ವಗಳ ಉಪಯುಕ್ತತೆಯ ಬಗೆಗೆ ಪ್ರಭಾವಿತರಾಗಿ ತಮ್ಮ ಅನುಭವದ ಬಗೆಗೆ ವಿವರವಾದ ಒಂದು ಪುಸ್ತಕವನ್ನೇ ಬರೆದರು. ಅದು ಯುರೋಪಿನ ಇತರ ಭಾಷೆಗಳಿಗೂ ಭಾಷಾಂತರವಾಯಿತು. ಯುರೋಪಿನಲ್ಲಿ ಇತರ ದೇಶಗಳಿಗೆ ಆಂಟಿಸೆಪ್ಟಿಕ್ ನಿಯಮಗಳು ಪ್ರಚಾರವಾಗುವುದಕ್ಕೆ ಅದು ತುಂಬಾ ಸಹಕಾರಿಯಾಯಿತು. ನಸ್‌ಬಾಮ್ ಲಿಸ್ಟರ್‌ಗೆ ಪತ್ರ ಬರೆದು "ಅರಿವಳಿಕೆಗಾಗಿ ಕ್ಲೋರೋಫಾರಂ ಜಾರಿಗೆ ಬಂದ ನಂತರ ತಾವು ನಿರೂಪಿಸಿದ

ಆಂಟಿಸೆಪ್ಟಿಕ್ ನಿಯಮಗಳು ವಿಜ್ಞಾನಕ್ಕೆ ಅತ್ಯುತ್ತಮ ಕೊಡುಗೆಯಾಗಿವೆ. ದೇವರು ನಿಮಗೆ ಒಳ್ಳೆಯದು ಮಾಡಲಿ ಮತ್ತು ನೀವು ನೂರ್ಕಾಲ ಬಾಳುವಂತಾಗಲಿ'' ಎಂದು ಹಾರೈಸಿದ್ದರು.

ಸ್ವಿಟ್ಸರ್‌ಲ್ಯಾಂಡ್‌ನ ಬಾಸ್ಲೆ ನಗರದ ಆಗಸ್ಟಸ್ ಸೋಸಿನ್ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಲೂಯಿ ಪ್ಯಾಶ್ಚರ್ ಮಾಡುತ್ತಿದ್ದಂತ ನಿಯಂತ್ರಿತ ಪ್ರಯೋಗಗಳನ್ನು ಜರುಗಿಸಿದರು. ಇಪ್ಪತ್ತು ರೋಗಿಗಳನ್ನು ಹಳೇ ಪದ್ಧತಿಯಂತೆಯೂ ಇನ್ನು ಇಪ್ಪತ್ತು ರೋಗಿಗಳನ್ನು ಆಂಟಿಸೆಪ್ಟಿಕ್ ನಿಯಮಗಳ ಆಚರಣೆಯಿಂದಲೂ ಶಸ್ತ್ರಚಿಕಿತ್ಸೆಗೊಳಪಡಿಸಿದರು. ಹಳೇ ಪದ್ಧತಿಯಂತೆ ಚಿಕಿತ್ಸೆಗೊಳಪಡಿಸಿದವರ ಪೈಕಿ ಹದಿಮೂರು ರೋಗಿಗಳ ಗಾಯಗಳಲ್ಲಿ ಕೀವಾಗಿ ತೀವ್ರ ತರಹೆಯ ತೊಡಕುಗಳನ್ನು ಅನುಭವಿಸಬೇಕಾಯಿತು. ಆಂಟಿಸೆಪ್ಟಿಕ್ ನಿಯಮಗಳಿಗನುಸಾರ ಚಿಕಿತ್ಸೆಗೊಳಗಾದವರೆಲ್ಲಾ ಕೀವಾಗಿ ನಂಜೇರದೇ ವಾಸಿಯಾಗಿದ್ದರು. ಫ್ರಾನ್ಸಿನ ಲೂಕಾಸ್ ಚಾಂಪಿಯನ್ನೀರೆ ಎಂಬ ಶಸ್ತ್ರವೈದ್ಯರು ಲಿಸ್ಟರ್‌ನ ಆಂಟಿಸೆಪ್ಟಿಕ್ ತತ್ವವನ್ನು ಕೇಳಿ ಅಚ್ಚರಿಪಟ್ಟಿದ್ದರು. ಗ್ಲಾಸ್ಗೋ ಆಸ್ಪತ್ರೆಗೇ ಭೇಟಿ ನೀಡಿ ಲಿಸ್ಟರ್ ಅನುಸರಿಸುತ್ತಿದ್ದ ನಿಯಮಗಳನ್ನು ಕಣ್ಣಾರೇ ನೋಡಿ ಬಂದಿದ್ದರು. ಫ್ರೆಂಚ್ ಭಾಷೆಯಲ್ಲಿ ಆಂಟಿಸೆಪ್ಟಿಕ್ ನಿಯಮಗಳ ಬಗೆಗೆ ಪುಸ್ತಕವೊಂದನ್ನು ಪ್ರಕಟಿಸಿದರು (1876). ಅದು ಫ್ರಾನ್ಸಿನಾದ್ಯಂತ ಆಂಟಿಸೆಪ್ಟಿಕ್ ನಿಯಮಗಳನ್ನು ಹರಡಲು ಸಹಕಾರಿಯಾಯಿತು. ಹೀಗೆ ಇಡೀ ಯುರೋಪ್ ಆಂಟಿಸೆಪ್ಟಿಕ್ ನಿಯಮಗಳನ್ನು ಆಚರಿಸುವಂತಾಯಿತು.

ಲಿಸ್ಟರ್‌ನ ಆಂಟಿಸೆಪ್ಟಿಕ್ ತತ್ವಗಳ ಪ್ರಯೋಗ ಗ್ಲಾಸ್ಗೋ ಆಸ್ಪತ್ರೆಯಲ್ಲಿ ಅದೆಷ್ಟು ಯಶಸ್ವಿಯಾಗಿ ಆಚರಣೆಗೆ ಬಂದಿದ್ದರೂ, ಇಂಗ್ಲೆಂಡಿನ ಇತರ ಭಾಗಗಳಲ್ಲಿ ಅವು ಅಷ್ಟೊಂದು ಪ್ರಚಾರಕ್ಕೆ ಬಂದಿರಲಿಲ್ಲವೆಂಬ ಕೊರಗು ಅವನಲ್ಲಿ ಉಳಿದುಕೊಂಡಿತ್ತು. ಲಂಡನ್ನಿನಂತಹ ಮಹಾನಗರದ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುವ ಅವಕಾಶ ದೊರೆತರೆ, ತಾನು ಅನುಸರಿಸುತ್ತಿರುವ ನಿಯಮಗಳು ವ್ಯಾಪಕವಾಗಿ ಪ್ರಚಾರಕ್ಕೆ ಬರುವ ಸಾಧ್ಯತೆಗಳ ಬಗೆಗೆ ಯೋಚಿಸುತ್ತಿದ್ದ. ಲಂಡನ್ನಿನಲ್ಲಿ ಆ ಸಮಯದಲ್ಲಿ ಖಾಲಿ ಇದ್ದ ಪ್ರಾಚಾರ್ಯರ ಹುದ್ದೆಗೆ ನೇಮಕಗೊಳ್ಳಲು ಪ್ರಯತ್ನಿಸಿದರೂ ಹಲವು ಕಾರಣಗಳಿಂದ ಅದು ದಕ್ಕಿರಲಿಲ್ಲ. ಆದರೆ ಮತ್ತೊಂದು ಸಾರಿ ಎಡಿನ್‌ಬರೋಗೆ ವಾಪಸು ಹೋಗುವ ಅವಕಾಶ ಉಂಟಾಯಿತು.

ಎಡಿನ್ ಬರೋದಲ್ಲಿ 1869ರ ಆದಿ ಭಾಗದಲ್ಲಿ ಮಾವ ಸೈಮ್ ಪಾರ್ಶ್ವವಾಯುವಿನ ದೆಸೆಯಿಂದ ನಿವೃತ್ತರಾಗಬೇಕಾಯಿತು. ಆ ಜಾಗ ಲಿಸ್ಟರ್‌ಗೆ ಅನಾಯಾಸವಾಗಿ ದೊರೆಯಿತು. ಎಡಿನ್‌ಬರೋದ ವೈದ್ಯಕೀಯ ವಿದ್ಯಾರ್ಥಿಗಳೂ ಅವನ ಪುನರಾಗಮನವನ್ನು ಸ್ವಾಗತಿಸಿದರು. ಅಲ್ಲಿಯ ಪರಿಸರವೂ ಚಿರಪರಿಚಿತವಾಗಿದ್ದು, ಅವನು ಹೊಸದಾಗಿ ನಿರೂಪಿಸುತ್ತಿದ್ದ ನಿಯಮಗಳ ಪ್ರಚಾರಕ್ಕೂ ಒಳ್ಳೆಯ ಅವಕಾಶ ದೊರೆಯುವಂತಿತ್ತು. ಲಿಸ್ಟರ್ ದಂಪತಿಗಳು 1869ರ ಆಗಸ್ಟ್‌ನಲ್ಲಿ ಎಡಿನ್ ಬರೋಗೆ ಮತ್ತೆ ಪ್ರಯಾಣ ಬೆಳೆಸಿದರು.

# ೧೦. ಮತ್ತೆ ಎಡಿನ್ ಬರೋ ...

ಸಂತೋಷದಿಂದ ಎಡಿನ್ ಬರೋಗೆ ಹಿಂದಿರುಗಿದ ಲಿಸ್ಟರ್ ಮತ್ತು ಆಗ್ನೀಸ್, ಚಾರ್ಲೊಟ್ಟೆ ಚೌಕದ ಹತ್ತಿರ ಒಂದು ಸುಂದರ ಬಂಗಲೆಯನ್ನು ಖರೀದಿಸಿ ವಾಸಿಸತೊಡಗಿದರು. ಅತ್ಯಂತ ಸುಂದರ ಪ್ರಾಕೃತಿಕ ದೃಶ್ಯಗಳಿದ್ದ ತಾಣವದು. ಪ್ರಿನ್ಸೆಸ್ ಗಾರ್ಡನ್ ಎಂಬ ಹೂದೋಟ ಹತ್ತಿರದಲ್ಲೇ ಇದ್ದು, ಲಿಸ್ಟರ್‌ನ ಬೆಳಗಿನ ತಿರುಗಾಟಕ್ಕೆ ಅಪ್ಯಾಯಮಾನಕರವಾಗಿತ್ತು. ಪ್ರತಿದಿನ ಮನಃಶಾಂತಿಗಾಗಿ ಸ್ವಲ್ಪ ಸಮಯ ಆ ಹೂದೋಟದಲ್ಲಿ ಕಾಲ ಕಳೆಯುವುದು ರೂಢಿಯಾಗಿ ಬಿಟ್ಟಿತು. ಜತೆಗೆ ಹಿಂದೆ ಯಾವ ಕಡೆಯೂ ಸಿಗದಷ್ಟು ಖಾಸಗಿ ರೋಗಿಗಳನ್ನು ನೋಡುವ ಅವಕಾಶವೂ ಅಲ್ಲಿತ್ತು. ಲಿಸ್ಟರ್ ದಂಪತಿಗಳು, ಅವರ ಅನೇಕ ಸಹೋದ್ಯೋಗಿಗಳು, ಸ್ನೇಹಿತರು ಮತ್ತು ನೆಚ್ಚಿನ ವಿದ್ಯಾರ್ಥಿಗಳೊಡನೆ ಆಗಾಗ ಸಂತೋಷ ಕೂಟಗಳನ್ನು ನಡೆಸುವುದಕ್ಕೂ ಅದು ಅನುಕೂಲಕರ ಬಂಗಲೆಯಾಗಿತ್ತು.

ಲಿಸ್ಟರ್ ಎಡಿನ್‌ಬರೋಗೆ ಬಂದ ಕೆಲವೇ ತಿಂಗಳುಗಳಲ್ಲಿ ಅವನ ಮಾರ್ಗದರ್ಶಕ ಮತ್ತು ಮಾವನೂ ಆಗಿದ್ದ ಜೇಮ್ ಸೈಮ್ ಕಾಲವಾದರು (ಜೂನ್ 1870). ವಿಪರ್ಯಾಸವೋ ಎಂಬಂತೆ ಇನ್ನೊಬ್ಬ ಮಹಾನ್ ವೈದ್ಯನೆನಿಸಿದ್ದ ಕ್ಲೋರೋಫಾರಂ ಜನಕ ಜೇಮ್ಸ್ ಸಿಂಪ್ಸನ್ ಕೂಡಾ ಅದೇ ಸಮಯದಲ್ಲಿ ಮರಣ ಹೊಂದಿದರು. ಸೈಮ್ ಮತ್ತು ಸಿಂಪ್ಸನ್ ಅವರಷ್ಟಕ್ಕೆ ಮಹಾ ವ್ಯಕ್ತಿಗಳಾಗಿದ್ದರೂ, ಇಬ್ಬರ ನಡುವೆ ಬದ್ಧ ವೈರವಿತ್ತು. ಲಿಸ್ಟರ್ ಪ್ರತಿಪಾದಿಸುತ್ತಿದ್ದ ಆಂಟಿಸೆಪ್ಟಿಕ್ ನಿಯಮಗಳನ್ನು ಸಿಂಪ್ಸನ್ ಕಟುವಾಗಿ ವಿರೋಧಿಸುತ್ತಿದ್ದುದಕ್ಕೆ ಇದೂ ಒಂದು ಕಾರಣವಾಗಿತ್ತೆನ್ನಲಾಗಿದೆ. ಲಿಸ್ಟರ್ ಎಡಿನ್ ಬರೋಗೆ ಬಂದ ಒಂದೇ ತಿಂಗಳಲ್ಲಿ ಅವನ ಪ್ರೀತಿಯ ತಂದೆಯೂ ಗತಿಸಿದ್ದು, ಅವನ ಜೀವಮಾನದಲ್ಲಿ ಜರುಗಿದ ಅತ್ಯಂತ ದುಃಖಕರ ಸಂಗತಿಯಾಯಿತು. ವೈಜ್ಞಾನಿಕ ಮತ್ತು ವೈಚಾರಿಕ ವಿಷಯಗಳನ್ನು ಮೈಗೂಡಿಸಿಕೊಂಡಿದ್ದ ಲಿಸ್ಟರ್‌ನ ತಂದೆ, ಜಾಕ್ಸನ್ ಲಿಸ್ಟರ್, ಅವನ ಸಂಶೋಧನಾ ಸಾಮರ್ಥ್ಯದಲ್ಲಿ ಅಪಾರ ಭರವಸೆ ಇಟ್ಟುಕೊಂಡವರು. ಆ ವಿಷಯದಲ್ಲಿ ಮಾರ್ಗದರ್ಶಕರೂ ಆಗಿದ್ದರು.

ಲಿಸ್ಟರ್ ಎಡಿನ್ ಬರೋದಲ್ಲಿ ಕ್ಲಿನಿಕಲ್ ಸರ್ಜರಿಯ ವಿಭಾಗದ ಮುಖ್ಯಸ್ಥನಾಗಿ ನೇಮಕವಾಗಿದ್ದ. ಆ ವಿಭಾಗ ಹಳೆಯ ಹೈಸ್ಕೂಲು ಕಟ್ಟಡದಲ್ಲಿ

ನೆಲೆಯಾಗಿದ್ದು, ಹಳೇ ಆಸ್ಪತ್ರೆಯೆಂದೇ ಹೆಸರಾಗಿತ್ತು. ಲಿಸ್ಟರ್ ಬರುವ ಮೊದಲು ವಾರದಲ್ಲಿ ಕೇವಲ ಎರಡು ಸಾರಿ ಪಾಠ ಪ್ರವಚನಗಳು ಜರುಗುವ ಏರ್ಪಾಡಿತ್ತು. ಲಿಸ್ಟರ್ ಈಗ ಪ್ರತಿ ದಿನ ಪಾಠ ಮಾಡುವುದಕ್ಕೆ ಶುರು ಮಾಡಿದ. ಶಸ್ತ್ರಚಿಕಿತ್ಸಾ ವಿಧಾನಗಳ ಬಗೆಗೆ ಪಾಠ ಮತ್ತು ಪ್ರಾತ್ಯಕ್ಷತೆಗಳು ಆಪರೇಷನ್ ಥಿಯೇಟರಿನಲ್ಲೇ ಜರುಗುತ್ತಿದ್ದವು. ಲಿಸ್ಟರ್ ಅದಕ್ಕಾಗಿ ಒಂದು ದೊಡ್ಡ ಹಾಲನ್ನು (HALL) ಖಾಲಿ ಮಾಡಿಸಿ ಅದರಲ್ಲಿ ಬೋಧನಾ ಕಾರ್ಯಕ್ರಮಗಳು ಜರುಗುವಂತೆ ಮಾಡಿದ. ಸುಮಾರು 400-500 ಜನ ಕೂರುವಷ್ಟು ಅವಕಾಶ ಅದರಲ್ಲಿತ್ತು. ಅವರ ಮಧ್ಯದಲ್ಲಿ ಒಂದು ಆಪರೇಷನ್ ಟೇಬಲ್ ಇರಿಸಿ ಆ ದಿನ ಚರ್ಚಿಸಬೇಕಾದ ರೋಗಿಯನ್ನು ಅದರ ಮೇಲೆ ಮಲಗಿಸುತ್ತಿದ್ದರು. ಸಹಾಯಕ ವೈದ್ಯನೊಬ್ಬ ಆ ರೋಗಿಯ ವ್ಯಾಧಿಗೆ ಸಂಬಂಧಿಸಿದ ಪ್ರಮುಖ ವಿಷಯಗಳ ಕಡೆ ಹೆಚ್ಚು ಗಮನಕೊಟ್ಟು ಅದರ ಆಗುಹೋಗುಗಳ ಬಗೆಗೆ ವಿಮರ್ಶೆ ಮಾಡುತ್ತಿದ್ದ. ತಾನು ಹೇಳ ಬೇಕಾದುದನ್ನು ಸುತ್ತಿ ಬಳಸದೇ, ನೇರವಾಗಿ ಹೇಳುವುದು ಅವನ ಸ್ವಭಾವವಾಗಿತ್ತು. ಬರೇ ಪುಸ್ತಕಗಳಲ್ಲಿರುವ ವಿಷಯಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಡದೆ, ಅವನು ಗಳಿಸಿದ ಅನುಭವದ ಸಾರ ಆ ಭಾಷಣಗಳಲ್ಲಿರುತ್ತಿದ್ದವು. ಆಂಟಿಸೆಪ್ಟಿಕ್ ನಿಯಮಗಳ ಪ್ರತಿಪಾದನೆ ಅದೆಷ್ಟು ಸಾರಿ ಮಾಡಿದರೂ ಸಾಲದೆಂಬಂತಿತ್ತು. ಒಂದು ದಿನದಲ್ಲಿ ನಾಲ್ಕಾರು ಜನ ರೋಗಿಗಳನ್ನು ಅಲ್ಲಿಗೆ ಕರೆಸಿ, ಅವರ ಬಗೆಗೆ ಪ್ರವಚನಗಳಾಗುತ್ತಿದ್ದವು. ಕಡೆಯ ಕಾರ್ಯಕ್ರಮವಾಗಿ ಯಾರಾದರೂ ಒಬ್ಬಿಬ್ಬರಿಗೆ ಶಸ್ತ್ರಚಿಕಿತ್ಸೆ ಜರುಗಿಸುತ್ತಿದ್ದ. ನೋವಿನ ನಿವಾರಣೆಗಾಗಿ ಬಳಸುವ ಅರಿವಳಿಕೆ ವಿಧಾನ ಅಷ್ಟೇನೂ ವ್ಯವಸ್ಥಿತವಾಗಿರದ ಆ ಸಮಯದಲ್ಲಿ ಶಸ್ತ್ರಚಿಕಿತ್ಸೆಗಳು ಆದಷ್ಟು ಕಡಿಮೆ ಸಮಯದಲ್ಲಿ ಮುಗಿಯುವುದು ಅನಿವಾರ್ಯವಾಗಿತ್ತು. ಲಿಸ್ಟರ್ ಇಂತಹ ಚುರುಕಿನ ಚಿಕಿತ್ಸೆಗಳನ್ನು ಜರುಗಿಸುವುದರಲ್ಲಿ ಹೆಸರುವಾಸಿಯಾಗಿದ್ದವನು. ಪ್ರತಿಯೊಂದು ವಿವರಗಳಿಗೂ ಹೆಚ್ಚಿನ ಗಮನ ಹರಿಸುತ್ತಿದ್ದ ಲಿಸ್ಟರ್‌ನ ವಿಧಾನಗಳು ಅನುಕರಣೀಯವಾಗಿದ್ದವು. ಅವನು ಜರುಗಿಸುವ ಶಸ್ತ್ರಚಿಕಿತ್ಸೆಗಳನ್ನು ವೀಕ್ಷಿಸಲು ವಿದ್ಯಾರ್ಥಿಗಳೇ ಅಲ್ಲದೆ ಇತರ ವೈದ್ಯರೂ ಅಲ್ಲಿ ಕಿಕ್ಕಿರಿದು ಸೇರುತ್ತಿದ್ದರು.

### ೧೦.೧ ಹೊಸ ಡ್ರೆಸ್ಸಿಂಗ್ ವಿಧಾನಗಳು

ಗ್ಲಾಸ್ಗೋ ಆಸ್ಪತ್ರೆಯಲ್ಲಿ ಗಾಯಗಳಿಗೆ ಕಾರ್ಬಾಲಿಕ್ ಆಮ್ಲದ ಲೇಪನ ಮಾಡುತ್ತಿದ್ದುದರಿಂದ ಒಳ್ಳೆಯ ಪರಿಣಾಮಗಳಾಗುತ್ತಿದ್ದರೂ ಅವುಗಳನ್ನು ಇನ್ನೂ

ಪರಿಪೂರ್ಣ ಮಾಡಬೇಕೆಂಬ ಮಹತ್ವಾಕಾಂಕ್ಷೆ ಲಿಸ್ಟರ್‌ಗೆ ಇದ್ದೇ ಇತ್ತು. ಗಾಯಗಳನ್ನು ಮುಚ್ಚಿ ಕಟ್ಟಲಾಗುತ್ತಿದ್ದ ಆ ಕಾಲದಲ್ಲಿ ಬಳಕೆಯಲ್ಲಿದ್ದ ಬಟ್ಟೆ ಬರೆಗಳು ಗಾಯದಿಂದ ಹೊರಬರುತ್ತಿದ್ದ ಕೀವು ಮುಂತಾದ ಕಸಗಳನ್ನು ಹೀರಿಕೊಳ್ಳುವ ಲಕ್ಷಣ ಹೊಂದಿರಲಿಲ್ಲ. ಅವು ಒಂದು ತರಹದ ಅರಗಿನಿಂದ ತಯಾರಿಸಿದಾದುದರಿಂದ (LAC PLASTER) ಗಾಳಿ ಸಹಾ ಒಳ ಹೊರಗೆ ಸಂಚರಿಸುವಂತಿರಲಿಲ್ಲ. ಈ ಅನಾನುಕೂಲತೆಯನ್ನು ನಿವಾರಿಸಲು ಲಿಸ್ಟರ್ ಕೆಲವು ಹೊಸ ಹೊಸ ಮಾರ್ಪಾಡುಗಳನ್ನು ಮಾಡಿದನು. ಮೊದಲು ಒಂದು ಬಗೆಯ ಸೆಣಬಿನ ನಾರಿನ ಎಳೆಗಳಿಂದ ತಯಾರಿಸಿದ ಪಟ್ಟಿಯನ್ನು ಕಾರ್ಬಾಲಿಕ್ ಆಮ್ಲದಲ್ಲಿ ಸ್ವಲ್ಪ ಕಾಲ ತೋಯಿಸಿ, ಗಾಯಗಳಿಗೆ ಮುಚ್ಚಿಕಟ್ಟುವ ಪ್ರಯೋಗ ನಡೆಯಿತು. ಅದರ ಎಳೆಗಳು ಗಾಯಕ್ಕೆ ಬಿಡಿಬಿಡಿಯಾಗಿ ಅಂಟಿಕೊಳ್ಳುತ್ತಿದ್ದುದರಿಂದ ಅದನ್ನು ಹೊರ ತೆಗೆಯುವಾಗ ರೋಗಿಗೆ ನೋವಾಗುತ್ತಿತ್ತು. ಅನಂತರ ಜವಳಿ ವರ್ತಕರು ಬಳಸುತ್ತಿದ್ದ ಒಂದು ಬಗೆಯ ಮಸ್ಲಿನ್ (MUSLINE) ಬಟ್ಟೆಯನ್ನು ಉಪಯೋಗಿಸತೊಡಗಿದ. ಈ ತರಹದ ''ಜಾಳರಿವೆ''ಯನ್ನು (GAUZE) ರೂಢಿಗೆ ತರುವಲ್ಲಿ ಹಲವು ಮಾರ್ಪಾಡುಗಳಾಗಬೇಕಾಯಿತು ಅಂತಹ ಬಟ್ಟೆಯ ಜೊತೆ ಆಂಟಿಸೆಪ್ಟಿಕ್ ದ್ರಾವಣವನ್ನು ಹಿಡಿದಿರಿಸುವುದು ಕಷ್ಟವಾಗುತ್ತಿತ್ತು. ಅದರಕ್ಕಾಗಿ ಆ ದ್ರಾವಣಗಳ ಜೊತೆ ಒಂದು ಬಗೆಯ ರಾಳ (RESIN) ವನ್ನು ಸೇರಿಸಿ ಬಳಸಲಾಯಿತು. ಈ ರೀತಿಯಲ್ಲಿ ಸಜ್ಜುಗೊಳಿಸಿದ ಕಾರ್ಬಾಲಿಕ್ ಆಮ್ಲದಲ್ಲಿ ಜಾಳರಿವೆಯ ಎಂಟು ಪದರಗಳನ್ನು ಅದ್ದಿ, ನಂತರ ಒಟ್ಟಾಗಿ ಸೇರಿಸಿ ಗಾಯಗಳಿಗೆ ಪಟ್ಟಿಕಟ್ಟಲು ಉಪಯೋಗಿಸುತ್ತಿದ್ದರು. ಅದರಲ್ಲೂ ಏಳು ಮತ್ತು ಎಂಟನೆಯ ಪದರಗಳ ನಡುವೆ ನೀರಿನಂತಹ ದ್ರವ ಪದಾರ್ಥಗಳನ್ನು ಹೀರದಂಥ ಜಾಕೋನೆಟ್ (JACONET/MCINTOSH) ತರಹದ ಪದರವನ್ನು ಸೇರಿಸುವ ಏರ್ಪಾಡಾಯಿತು. ಜಾಳ ಅರಿವೆಯ ಪದರಗಳಲ್ಲಿ ಹೀರಿಕೊಂಡಿದ್ದ ದ್ರವಗಳು ಈ ಮಟ್ಟಕ್ಕೆ ಬಂದಾಗ, ಅದರ ಮೇಲ್ಮೈಯಿಂದ ಹೊರಗೆ ಜಾರಿ ಇಳಿದು ಹೋಗುವ ಅವಕಾಶ ಮಾಡಿಕೊಟ್ಟಂತಾಯಿತು. ಈ ತರಹದ ಜಾಳರಿವೆ ಪಟ್ಟಿಗಳನ್ನು ಸುರುಳಿಗಳಾಗಿ ಮಾಡಿಟ್ಟುಕೊಂಡು, ಗಾಯಗಳಿಗೆ ಸುತ್ತಿಕಟ್ಟುವುದು ಮುಂದೆ ಕೆಲವು ವರ್ಷಗಳವರೆಗೂ ಮುಂದುವರೆದಿತ್ತು. ಇದೇ ಮುಂದೆ ವರ್ಷಗಳು ಕಳೆದಂತೆಲ್ಲಾ ಹಲವು ಮಾರ್ಪಾಡುಗಳಿಗೊಳಗಾಗಿ, ಪ್ರಸ್ತುತ ಜಾರಿಯಲ್ಲಿರುವ 'ಜೀವಿಶುದ್ಧೀಕರಿಸಿದ ಜಾಳರಿವೆ' (STERILIZED GAUZE) ಯಾಗಿ ಉಳಿದುಕೊಂಡಿದೆ. ಈಗ ಜೀವಿಶುದ್ಧೀಕರಿಸಿದ ಜಾಳರಿವೆ ಮತ್ತು 'ಹೀರೊತ್ತು'ಗಳು

ಆಸ್ಪತ್ರೆಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿದ್ದರೂ ಅವುಗಳನ್ನು ಮೊಟ್ಟಮೊದಲು ಜಾರಿಗೆ ತಂದದ್ದು ಜೋಸೆಫ್ ಲಿಸ್ಟರ್ ಎಂಬುದು ಯಾರಿಗೂ ತಿಳಿದಂತಿಲ್ಲ.

## ೧೦.೨ ಆಂಟಿಸೆಪ್ಟಿಕ್ ಸ್ಪ್ರೇ ಯಂತ್ರ

ಯಾವುದೇ ಗಾಯಕ್ಕೆ ಮೊದಲೇ ಸೂಕ್ಷ್ಮ ಜೀವಾಣುಗಳ ಸೋಂಕು ತಗುಲಿರಬಹುದು; ಶಸ್ತ್ರಚಿಕಿತ್ಸೆ ಜರುಗಿಸುವ ಸಮಯದಲ್ಲಿ ವೈದ್ಯರ ಕೈ ಇಲ್ಲವೆ ಬಳಸುವ ಸಲಕರಣೆಗಳಿಂದಲೂ ಅಂತಹ ಸೋಂಕು ತಗಲಬಹುದು; ಇವೆರಡು ರೀತಿಯಲ್ಲೇ ಅಲ್ಲದೆ ಶಸ್ತ್ರಚಿಕಿತ್ಸೆ ಜರುಗಿಸುವ ಸಮಯದಲ್ಲಿ ಸುತ್ತಲ ವಾತಾವರಣದ ಧೂಳಿನ ಕಣಗಳು ಗಾಯಕ್ಕೆ ಬೀಳುವುದರಿಂದಲೂ ಜೀವಾಣು ಸೋಂಕು ತಗುಲಬಹುದೆಂಬುದು ಈಗ ಲಿಸ್ಟರ್‌ಗೆ ಹೊಳೆಯಿತು. ಆ ಸಮಯದಲ್ಲೇ ಭೌತಶಾಸ್ತ್ರಜ್ಞ ಜಾನ್ ಟಿಂಡಾಲ್ (JOHN TINDAL) ಎಂಬುವರು ಪ್ರದರ್ಶಿಸಿದ ಪ್ರಾಕೃತಿಕ ತತ್ವ - "ಟಿಂಡಾಲ್ ತೋರಿಕೆ" (TINDAL PHENOMENON) ದತ್ತ ಲಿಸ್ಟರ್ ಗಮನ ಸೆಳೆಯಿತು. ಮನೆಯ ಕೊಠಡಿಯ ಕಿಟಕಿಯ ಸರಳುಗಳ ನಡುವಿನ ಸಂದಿಯ ಮೂಲಕ ಹೊತ್ತಾರೆಯ ಸೂರ್ಯನ ಕಿರಣಗಳು ಪ್ರವಹಿಸಿದಾಗ ಆ ಬೆಳಕಿನ ದಂಡ (LIGHT BEAM) ಹರಿಯುವಲ್ಲಿ ಧೂಳಿನ ಕಣಗಳು ಎದ್ದು ಕಾಣವುದಲ್ಲದೆ, ಅವುಗಳ ಚಲನೆಯನ್ನು ನೋಡಬಹುದು. ಅಂತಹ ಧೂಳಿನ ಕಣಗಳು ಕೊಠಡಿಯ ಎಲ್ಲಾ ಕಡೆ ಇರುತ್ತವಾದರೂ, ಬೆಳಕಿನ ಪ್ರಭಾವದಿಂದ ಅವು ಪ್ರಕಾಶಮಾನವಾಗಿ ಕಾಣಿಸುವುದು ಪ್ರಕೃತಿ ನಿಯಮ. ಅದೇ ರೀತಿಯಲ್ಲಿ ಆಪರೇಷನ್ ಕೊಠಡಿಗಳಲ್ಲಿ ಧೂಳಿನ ಕಣಗಳು ತೇಲಾಡುತ್ತಿರಬಹುದೆಂಬುದು ಲಿಸ್ಟರ್ ಅನಿಸಿಕೆಯಾಯಿತು. ಅವುಗಳಲ್ಲಿರುವ ಸೂಕ್ಷ್ಮ ಜೀವಾಣುಗಳು ಶಸ್ತ್ರಚಿಕಿತ್ಸೆಯ ಸಮಯದಲ್ಲಿ ಗಾಯದ ಮೇಲೇರಿ ಕೀವು ಉಂಟುಮಾಡುವುದರಲ್ಲಿ ತಮ್ಮ ಪಾತ್ರ ವಹಿಸುತ್ತವೆಂದು ಯೋಚಿಸಿದ. ಬ್ರಿಟಿಷ್ ಮೆಡಿಕಲ್ ಅಸೋಸಿಯೇಷನ್ ಸಮ್ಮೇಳನ 1871ರಲ್ಲಿ ಪ್ಲೈಮೌತ್ ನಗರದಲ್ಲಿ ಜರುಗಿದಾಗ ತನ್ನ ವಾದವನ್ನು ಸ್ಪಷ್ಟೀಕರಿಸಲು ವೈದ್ಯರೆದುರು ಈ ತತ್ವವನ್ನು ಪ್ರತ್ಯಕ್ಷವಾಗಿ ತೋರಿಸಿಕೊಟ್ಟಿದ್ದ ಕೂಡ.

ಆಪರೇಷನ್ ಕೊಠಡಿಯಲ್ಲಿರಬಹುದಾದ ಈ ತರಹದ ಜೀವಾಣುಗಳು ಗಾಯಗಳಲ್ಲಿ ಬೀಳದ ಹಾಗೆ ಮಾಡುವುದು ಲಿಸ್ಟರ್‌ನ ಮುಂದಿನ ಕೆಲಸವಾಯಿತು ಶಸ್ತ್ರಚಿಕಿತ್ಸೆ ನಡೆಯುವ ಸೀಮಿತ ವಲಯದಲ್ಲಿ ಕಾರ್ಬಾಲಿಕ್ ಆಮ್ಲದ

ವಾತಾವರಣವಿರುವಂತೆ ಮಾಡುವುದಾದರೆ ಜೀವಾಣುಗಳನ್ನುನಾಶ ಮಾಡಬಹುದೆಂದು ಯೋಚಿಸಿದ. ಅದಕ್ಕಾಗಿ ಒಂದು ಸ್ಪ್ರೇ ಪಂಪ್ (SPRAY PUMP) ನ್ನು ತಯಾರಿಸಿ, ಅದರಲ್ಲಿ ಕಾರ್ಬಾಲಿಕ್ ಆಮ್ಲವನ್ನಿರಿಸಿ (ಒಂದು ಭಾಗ ಕಾರ್ಬಾಲಿಕ್ ಆಮ್ಲಕ್ಕೆ ನೂರು ಭಾಗ ನೀರು ಸೇರಿಸಿ) ಪಂಪನ್ನು ಚಾಲನೆ ಮಾಡುವುದರಿಂದ ಆ ಮಿಶ್ರಣದ ತುಂತುರುಗಳು ಆ ವಲಯದಲ್ಲಿ ಸದಾ ಬೀಳುವಂತೆ ಮಾಡಿದ. ಶಸ್ತ್ರಚಿಕಿತ್ಸೆ ಆರಂಭವಾಗುತ್ತಿದ್ದಂತೆಯೇ ಸಹಾಯಕನೊಬ್ಬ ಪಂಪನ್ನು ಚಾಲೂ ಮಾಡಿ ತುಂತುರುಗಳು ಬೀಳುವಂತೆ ಮಾಡಬೇಕಾದರೆ ಅದೊಂದು ಅತ್ಯಂತ ಪ್ರಯಾಸದ ಕೆಲಸವಾಗುತ್ತಿತ್ತು. ಅದರ ಚಾಲನೆ ಮಾಡುತ್ತಿದ್ದವನೊಬ್ಬ ಒಂದು ಸಲ ತಲೆ ತಿರುಗಿ ಬಿದ್ದೇ ಬಿಟ್ಟನಂತೆ ! ಲಿಸ್ಟರ್ ಇನ್ನೂ ಸರಳ ರೀತಿಯ ಯಂತ್ರವನ್ನು ತಯಾರಿಸಿ ತುಂತುರುಗೊಳಿಸುತ್ತಿದ್ದ ಕಾರ್ಬಾಲಿಕ್ ಆಮ್ಲದ ಸಾಂದ್ರತೆಯನ್ನು (1:40)ಯನ್ನು ಹೆಚ್ಚಿಸಿದ. ಹೀಗೆ ಒಂದಲ್ಲ ಒಂದು ತೊಡಕುಗಳು ಎದುರಾಗದಾಗಲೆಲ್ಲಾ ಅದಕ್ಕೆ ಸೂಕ್ತ ಪರಿಹಾರ ಮತ್ತು ಬಲಾವಣೆ ಮಾಡುವುದರಲ್ಲಿ ಲಿಸ್ಟರ್ ಬಹಳ ಸಮಯ ಕಳೆಯುತ್ತಿದ್ದ. ಪ್ರತಿ ದಿನ ನಾಲ್ಕಾರು ಶಸ್ತ್ರಚಿಕಿತ್ಸೆಯಲ್ಲಿ ತೊಡಗಿರುತ್ತಿದ್ದ ವೈದ್ಯರು, ದಾದಿಯುರು ಮುಂತಾದ ಸಿಬ್ಬಂದಿಗೆ ಕೈಮೇಲೆ ಸದಾ ಕಾರ್ಬಾಲಿಕ್ ಆಮ್ಲ ಬೀಳುತ್ತಿದ್ದುದರಿಂದ ಅವರ ಕೈಗಳಲ್ಲಿಸುಟ್ಟ ಬೊಬ್ಬೆಗಳಾಗುತ್ತಿದ್ದವು. ಮುಂದೆ ಅದರ ನಿವಾರಣೆಗೆ ಕೈಗಳಿಗೆ ರಬ್ಬರ್ ಗವಸುಗಳನ್ನು (RUBBER GLOUSES) ತೊಟ್ಟುಕೊಳ್ಳುವ ಅಭ್ಯಾಸ ಜಾರಿಗೆ ಬಂತು. ಕಾರ್ಬಾಲಿಕ್ ಆಮ್ಲದ ಆವಿಯನ್ನು ಅವರೆಲ್ಲಾ ಸದಾ ಸೇವಿಸುತ್ತಿರಬೇಕಾದುದರಿಂದ ಗಂಟಲು, ಶ್ವಾಸಕೋಶಗಳಲ್ಲಿಉರಿತ ಉಂಟಾಗುತ್ತಿತ್ತು. ಅದರಿಂದ ಗಂಟಲು ನೋವು, ಕೆಮ್ಮು ದಮ್ಮು ಕೆಲವರನ್ನು ಸದಾ ಪೀಡಿಸುತ್ತಿದ್ದವು. ಮುಂದೆ ಬಾಯಿ, ಮೂಗು ಮತ್ತುತಲೆಗೆ ಮುಖಪಟ್ಟಿಗಳನ್ನು (CAPS AND MASKS) ಪದ್ಧತಿ ಜಾರಿಗೆ ಬಂದ ಮೇಲೆ ಈ ಚಿಹ್ನೆಗಳು ಕಡಿಮೆಯಾದವು. ಆದರೂ ಲಿಸ್ಟರ್1877 ವರೆಗೂ ಈ ಪದ್ಧತಿಯನ್ನು ತನ್ನ ಆಪರೇಷನ್ ಕೊಠಡಿಗಳಲ್ಲಿ ಖಾಯಂ ಮಾಡಿದ್ದ. ಶಸ್ತ್ರಚಿಕಿತ್ಸೆ ಆರಂಭವಾಗುತ್ತಿದ್ದಂತೆಯೇ ''ಸ್ಪ್ರೇಯಂತ್ರ ಶುರುಮಾಡಿ'' ಎಂದು ಗಟ್ಟಿಯಾಗಿ ಹೇಳುವುದು ಶಸ್ತ್ರಚಿಕಿತ್ಸಾ ವಿಧಾನದ ಒಂದು ಭಾಗವೇ ಆಗಿಬಿಟ್ಟಿತು. ಲಿಸ್ಟರ್‌ನ ಇತರ ನಿಯಮಗಳನ್ನು ಅನುಸರಿಸುತ್ತಿದ್ದವರೂ ಸಹಾ ಇಂತಹ ಯಂತ್ರವನ್ನು ಉಪಯೋಗಿಸುತ್ತಿದ್ದರು.

ತಾನು ಕೈಗೊಳ್ಳುತ್ತಿದ್ದ ಯಾವುದೇ ಕಾರ್ಯಕ್ರಮದ ಪ್ರತಿ ಚಿಕ್ಕಪುಟ್ಟ ವಿವರಗಳಿಗೂ ತೀವ್ರ ಗಮನಕೊಡುವುದು ಜೊಸೆಫ್ ಲಿಸ್ಟರ್ ರೂಢಿಸಿಕೊಂಡು ಬಂದಿದ್ದ ಸ್ವಾಭಾವಿಕ ಗುಣವಾಗಿತ್ತು. "ಯಾವುದೇ ಕಾರ್ಯದ ಜಯಾಪಜಯಗಳು ಅದರ ಪ್ರತಿಯೊಂದು ವಿಷಯಗಳಿಗೂ ತೀವ್ರ ಗಮನಹರಿಸುವುದರ ಮೇಲೆ ಅವಲಂಬಿಸಿರುತ್ತದೆ" ಎಂಬುದು ಜೋಸೆಫ್ ಲಿಸ್ಟರ್‌ನ ಧ್ಯೇಯ ವಾಕ್ಯವಾಗಿಬಿಟ್ಟಿತು. ಗಾಯಗಳಿಗೆ ಕಟ್ಟುವ ಬ್ಯಾಂಡೇಜು ಪಟ್ಟಿ (BANDAGE) ಗಳನ್ನು ಸರಿಯಾದ ಸ್ಥಾನದಲ್ಲಿ ಇರಿಸಲು ಸಿಕ್ಕಿಸುವ ಪಿನ್ನುಗಳು (PINS) ಕಪ್ಪು ಬಣ್ಣದವೇ ಆಗಿರಬೇಕೆಂಬ ನಿಯಮ ಮಾಡಿದ್ದ; ಬಿಳೀ ಬಟ್ಟೆಗಳ ನಡುವೆ ಅವುಗಳನ್ನು ಸುಲಭವಾಗಿ ಗುರುತಿಸಬಹುದಾಗಿತ್ತು ಅವು ಗಾಯದಲ್ಲಿ ಒತ್ತಡವಿರುವ ವಲಯಕ್ಕೆ ಸಮಾನಂತರವಾಗಿಯೇ ಇರಬೇಕು. ಅಡ್ಡಲಾಗಿ ಚುಚ್ಚಿ ಸೇರಿಸಿದರೆ ಅವು ಪಟ್ಟಿಯನ್ನೇ ಹರಿದುಬಿಡಬಹುದು. ತನ್ನ ಎಲ್ಲಾ ರೋಗಿಗಳಿಗೆ ಬಳಸುವ ಬ್ಯಾಂಡೇಜು ಸ್ವತಃ ಅವನೇ ಶುಚಿಗೊಳಿಸಿ, ಕಾರ್ಬಾಲಿಕ್ ಆಮ್ಲದಲ್ಲಿ ತೋಯಿಸಿ, ಜಾಳರಿವೆಗಳನ್ನುತಯಾರು ಮಾಡಿಕೊಳ್ಳುತ್ತಿದ್ದ. ಸಹಾಯಕರು ಹೊರಗಿನ ಪಟ್ಟಿಯನ್ನು ಮಾತ್ರ ಸುತ್ತಬಹುದಿತ್ತು. ಪ್ರತಿಯೊಂದು ರೋಗಿಯನ್ನು ಪರೀಕ್ಷೆಗೊಳಪಡಿಸುವ ಮೊದಲು ಕುಶಲ ಪ್ರಶ್ನೆಗಳನ್ನು ಮಾಡಿ, ಅವರು ನೆಮ್ಮದಿಯಿಂದಿರುವರೇ ಎಂದು ಖಚಿತಪಡಿಸಿಕೊಂಡ ನಂತರವೇ ಮುಂದುವರಿಯುವುದು. ನೀವು ಸ್ವತಃ ರೋಗಿಯಾಗಿದ್ದರೆ ನಿಮಗೇನನ್ನಿಸುತ್ತಿತ್ತು? ಎಂಬುದನ್ನು ಅರಿತು ಇತರ ರೋಗಿಗಳೊಡನೆ ವರ್ತಿಸಿ" ಎಂದು ತನ್ನ ಸಹೋದ್ಯೋಗಿಗಳಿಗೆ ಆಗಾಗ್ಗೆ ಹಿತವಚನ ನೀಡುತ್ತಿದ್ದನು. ಆಗ ತಾನೆ ಅರಿವಳಿಕೆಗಾಗಿ ಬಳಕೆಗೆ ಬಂದಿದ್ದ ಕ್ಲೋರೋಫಾರಂ ನೀಡುವುದರಲ್ಲಿ ಲಿಸ್ಟರ್‌ಗೆ ಒಳ್ಳೆಯ ಪರಿಣತಿ ಇತ್ತು.. ಆದರೂ ಬಹಳಷ್ಟು ಮುತುವರ್ಜಿವಹಿಸಿ ರೋಗಿಗಳನ್ನು ಅರಿವಳಿಕೆಗೊಳಪಡಿಸುತ್ತಿದ್ದ. ಅರಿವಳಿಕೆಗೊಳಗಾದವರ ಉಸಿರಾಟ ಸರಿಯಾದ ರೀತಿಯಲ್ಲಿ ಜರುಗುತ್ತಿದೆಯೇ ಇಲ್ಲವೇ ಎಂಬುದನ್ನು ಗಮನಿಸಿ, ಕ್ಲೋರೋಫಾರಂನ ಪ್ರಮಾಣವನ್ನು ಹೆಚ್ಚುಕಡಿಮೆ ಮಾಡಿ ನೀಡಬೇಕು. ಲಿಸ್ಟರ್ ತಾನೇ ನೀಡುವಾಗಲೂ ಅದರಲ್ಲಿ ಗಮನವಿರಿಸುತ್ತಿದ್ದ. ಕೆಲವು ಸಮಯ ಸಹಾಯಕರಿಂದ ಕೊಡಿಸಬೇಕಾಗುತ್ತಿತ್ತು. ಅವರು ಸಹಾ ಆ ರೀತಿ ಗಮನವಿರಿಸಬೇಕಾಗುತ್ತದೆಂದು ಎಚ್ಚರಿಸುತ್ತಿದ್ದ; ಸ್ವತಃ ಅವನೇ ಶಸ್ತ್ರಚಿಕಿತ್ಸೆ ನಡೆಸುವುದರಲ್ಲಿ ತೊಡಗಿದ್ದಾಗಲೂ ರೋಗಿಯ ಉಸಿರಾಟದ ಮೇಲೆ ಸದಾ ಅವನ ಗಮನವಿರುತ್ತಿತ್ತು. ವಿಕ್ಟೋರಿಯಾ

ಮಹಾರಾಣಿಯ ಕಂಕುಳಲ್ಲಿ ಒಂದು ಸಾರಿ ಕುರ ಉದ್ಭವಿಸಿ ಬಹಳ ವೇದನೆ ಪಡುತ್ತಿದ್ದಳು. ಸ್ವತಃ ಲಿಸ್ಟರ್‌ನೇ ಅವಳಿಗೆ ಕ್ಲೋರೋಫಾರಂ ನೀಡಿ, ಕುರುವನ್ನು ಬಗೆದು ಕೀವನ್ನು ಹೊರಬಿಟ್ಟನು. ಅವನು ಅತ್ಯಂತ ನಯ ನಾಜೂಕಿನಿಂದ, ಸ್ವಲ್ಪವೂ ನೋವಾಗದಂತೆ ಜರುಗಿಸಿದ ಶಸ್ತ್ರಚಿಕಿತ್ಸೆ ಮಹಾರಾಣಿಯ ಮೆಚ್ಚುಗೆ ಗಳಿಸಿತು. ಮೊಟ್ಟ ಮೊದಲ ಸಾರಿ ಕುರುವೊಂದರಿಂದ ಕೀವು ಇಳಿದು ಬರಲು ರಬ್ಬರ್ ನಳಿಕೆಯಿಂದ ಮಾಡಿದಸಿತ ಕೊಳವೆ' (DRAINAGE TUBES) ಯನ್ನು ಇರಿಸಿದ್ದು ಈ ಪ್ರಕರಣದಲ್ಲೇ. ಅಂತಹ ಕೊಳವೆಗಳು ಈಗಲೂ ಬಳಕೆಯಲ್ಲಿವೆ.

ಮುಂದಿನ ಕೆಲವೇ ತಿಂಗಳುಗಳಲ್ಲಿ ವಿಕ್ಟೋರಿಯಾ ಮಹಾರಾಣಿಯ ಅಭಿಪ್ರಾಯವೊಂದರ ವಿರುದ್ಧ ಲಿಸ್ಟರ್ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಬೇಕಾಯಿತು. ವೈದ್ಯಕೀಯ ಸಂಶೋಧನೆಗಳಿಗೆ ಕೆಲವು ಪ್ರಾಣಿಗಳನ್ನು ಪ್ರಯೋಗ ಪಶುಗಳಾಗಿ ಬಳಸಿಕೊಳ್ಳುವುದನ್ನು ಮಹಾರಾಣಿಯವರು ವಿರೋಧಿಸಿ ಹೇಳಿಕೆ ನೀಡಿದ್ದರು. ಆ ಬಗೆಗೆ ಜೋಸೆಫ್ ಲಿಸ್ಟರ್ ಕೂಡ ಅಭಿಪ್ರಾಯ ನೀಡಬಹುದೆಂದು ಸೂಚಿಸಿದ್ದರಂತೆ. ಲಿಸ್ಟರ್ ತನ್ನ ಹೇಳಿಕೆಯಲ್ಲಿ ''ನೂರಾರು ಬಗೆಯ ಕಾಯಿಲೆಗಳ ಕಾರಣಗಳು ಇನ್ನೂ ತಿಳಿದುಬಂದಿಲ್ಲ. ಯಶಸ್ವೀ ಚಿಕಿತ್ಸಾ ವಿಧಾನಗಳಾಗಲೀ ಮದ್ದುಗಳಾಗಲೀ ಲಭ್ಯವಿಲ್ಲ. ಕಾಯಿಲೆಗಳ ಮರ್ಮವನ್ನರಿತು, ಯಶಸ್ವೀ ಚಿಕಿತ್ಸಾ ವಿಧಾನಗಳನ್ನು ಅಳವಡಿಸಲು ಕೆಲವು ಪ್ರಾಣಿಗಳಮೇಲೆ ಪ್ರಯೋಗ ಜರುಗಿಸದೇ ಬೇರೆ ಮಾರ್ಗಗಳಿರುವುದಿಲ್ಲ ಆದುದರಿಂದ ಪ್ರಾಣಿ ಪ್ರಯೋಗ ಬಹಳ ಕಾಲದಿಂದ ಜಾರಿಯಲ್ಲಿದೆ. ನಾನೂ ಸಹ ಕೆಲವು ಪ್ರಾಣಿಗಳನ್ನು ಉಪಯೋಗಿಸಿಕೊಂಡು ಪ್ರಯೋಗಗಳನ್ನು ಜರುಗಿಸಿದ್ದೇನೆ. ಪ್ರಯೋಗಗಳಿಗೆ ಬಳಸಿಕೊಳ್ಳುವ ಪ್ರಾಣಿಗಳನ್ನು ಮಾನವೀಯತೆಯಿಂದ ನೋಡಿಕೊಳ್ಳಲಾಗುತ್ತದೆ. ಹೊತ್ತಿಂದೊತ್ತಿಗೆ ಅವುಗಳಿಗೆ ಆಹಾರ ನೀಡಲಾಗುತ್ತದೆ. ಅವುಗಳಿಗೆ ಪ್ರಾಯೋಗಿಕ ಶಸ್ತ್ರಚಿಕಿತ್ಸೆ ಅಥವಾ ಯಾವುದೇ ಗಾಯ ಉಂಟು ಮಾಡಬೇಕಾದ ಸಂದರ್ಭಗಳಲ್ಲಿ ಕ್ಲೋರೋಫಾರಂ ನೀಡಿ ನೋವಾಗದಂತೆ ನೋಡಿಕೊಳ್ಳುತ್ತಾರೆ. ಮಾನವ ಕುಲದ ಹಿತದೃಷ್ಟಿಯಿಂದ ಇಂತಹ ಪ್ರಾಣಿ ಪ್ರಯೋಗಗಳು ಅತ್ಯಾವಶ್ಯಕ; ಆದರೆ ಆಹಾರಕ್ಕಾಗಿ ಬೇಟೆಯಾಡುವ ಜಿಂಕೆ ಅಥವಾ ಮೊಲಗಳಿಗೆ ನೋವಾಗುತ್ತದೆಂದು ಯಾರಾದರೂ ಯೋಚಿಸುತ್ತಾರೆಯೆ ? ಕಸಾಯಿ ಖಾನೆಗಳಲ್ಲಿ ಪ್ರಾಣಿಗಳನ್ನು ವಧಿಸುವಾಗ, ಅವುಗಳಿಗೆ ನೋವಾಗದಂತೆ ನೋಡಿಕೊಳ್ಳುತ್ತಾರೆಯೇ ?

ಆದುದರಿಂದ ಮಾನವ ಕುಲದ ಒಳಿತಿಗಾಗಿ ಕೈಗೊಳ್ಳುವ ಪ್ರಾಣಿ ಪ್ರಯೋಗಗಳಿಗೆ ನಿರ್ಬಂಧ ವಿಧಿಸುವುದು ಸರಿಯಲ್ಲ ಎಂದು ಹೇಳಿದ್ದನು. ಮುಂದೆ ಈ ಬಗ್ಗೆ ರಾಯಲ್ ಕಮೀಷನ್ ನೇಮಿಸಿದಾಗ ಅದರ ಎದಿರಿಗೂ ಇದೇ ತರಹೆಯ ಸಾಕ್ಷ್ಯ ನೀಡಿದ್ದ. ಆದರೂ ಅವನ ಇಚ್ಛೆಗೆ ವಿರುದ್ದವಾದ ಕಾನೂನು ಪಾಸಾಯಿತು (1876).

ಲಿಸ್ಟರ್ ಪ್ರಾಣಿ ಪ್ರಯೋಗಗಳ ಬಗೆಗೆ ನೀಡಿದ್ದ ಹೇಳಿಕೆಗಳು ಪ್ರಪಂಚದಾದ್ಯಂತ ವಿಜ್ಞಾನಿಗಳ ಮೆಚ್ಚುಗೆ ಗಳಿಸಿತು. ಅಮೆರಿಕಾದ ಫಿಲಡೆಲ್ಫಿಯದಲ್ಲಿ 1898ರಲ್ಲಿ ಇಂತಹದೇ ಕಾನೂನು ತರುವ ಸನ್ನಾಹಗಳು ನಡೆಯುತ್ತಿದ್ದಾಗ ಹಲವು ವೈದ್ಯರು ಜೋಸೆಫ್ ಲಿಸ್ಟರ್‌ಗೆ ಪತ್ರ ಬರೆದು ಅವನ ಅಭಿಪ್ರಾಯವನ್ನು ತಿಳಿಸುವಂತೆ ಕೋರಿದ್ದರು. ಲಿಸ್ಟರ್ ಆಗಲೂ ತನ್ನ ಸ್ಪಷ್ಟ ಅಭಿಪ್ರಾಯಗಳನ್ನ ತಿಳಿಸಿದ್ದನು.

# ೧೧. ಲಿಸ್ಟರ್ ಮತ್ತು ಪ್ಯಾಶ್ಚರ್

ಇಲ್ಲಿಯವರೆಗಿನ ವಿವರಣೆಗಳಿಂದ ಜೋಸೆಫ್ ಲಿಸ್ಟರ್ ಒಬ್ಬ ಶಸ್ತ್ರವೈದ್ಯ; ವೃತ್ತಿಯಲ್ಲಿ ಅವನು ಎದುರಿಸಬೇಕಾಗುತ್ತಿದ್ದ ಸಮಸ್ಯೆಗಳಿಗೆ ಪರಿಹಾರ ಕಂಡುಹಿಡಿಯಲು ಪ್ರಯತ್ನಿಸುತ್ತಿದ್ದವನೆಂಬ ಭಾವನೆ ಸ್ವಾಭಾವಿಕವಾಗಿ ಮೂಡಿ ಬರಲು ಸಾಧ್ಯ. ಗಾಯಗಳಲ್ಲಿ ಕೀವಾಗುವುದಕ್ಕೆ ವಾತಾವರಣದಲ್ಲಿರುವ ಸೂಕ್ಷ್ಮ ಜೀವಿಗಳೇ ಕಾರಣವೆಂಬುದು ಅವನ ಕನಸಿನ ಕೂಸಾಗಿತ್ತಷ್ಟೆ. ಆ ತನಕ ಅಗೋಚರವಾಗಿದ್ದ ಅವುಗಳ ಇರುವಿಕೆ ಮತ್ತು ಅವುಗಳಿಂದಾಗುತ್ತಿದ್ದ ಅನಾಹುತಗಳನ್ನು ಪರೋಕ್ಷವಾಗಿ ಸಾಧಿಸಲು ಪ್ರಯತ್ನಿಸುತ್ತಿದ್ದ. ಅವನ ಮಟ್ಟಿಗೆ ಹೇಳುವುದಾದರೆ ಆ ದಿಸೆಯಲ್ಲಿ ಸ್ವಲ್ಪ ಯಶಸ್ವಿಯಾಗಿದ್ದನೆಂದು ಹೇಳಬಹುದು. ಅವುಗಳನ್ನು ಭೌತಿಕವಾಗಿ ಪ್ರದರ್ಶಿಸದೆ, ಅವನ ವಾದಗಳನ್ನು ಒಪ್ಪಿಕೊಳ್ಳಲು ಇತರ ವೈದ್ಯರು ತಯಾರಿರಲಿಲ್ಲ. ಆದುದರಿಂದ ಲಿಸ್ಟರ್‌ನ ಕೆಲಸ ಅತ್ಯಂತ ಕಷ್ಟ ಸಾಧ್ಯದ್ದಾಗಿತ್ತು.

ಫ್ರಾನ್ಸಿನ ಲೂಯಿ ಪ್ಯಾಶ್ಚರ್ ಕೂಡಾ ಸೂಕ್ಷ್ಮ ಜೀವಿಗಳ ಇರುವಿಕೆಯ ಬಗೆಗೆ ನಂಬಿಕೆ ಇದ್ದವನೆ. ದ್ರಾಕ್ಷಾರಸದಲ್ಲಿ ಹುದುಗೇಳುವ ಕ್ರಿಯೆಗೆ ಜೀವಂತ ಸೂಕ್ಷ್ಮ ಜೀವಿಗಳೇ ಕಾರಣವೆಂಬುದನ್ನು ಕೆಲವು ನಿಯಂತ್ರಿತ ಪ್ರಯೋಗಗಳಿಂದ ಶ್ರುತಪಡಿಸಿದ್ದ. ಆದರೆ ಅವನೂ ಸಹ ಅವುಗಳನ್ನು ಭೌತಿಕವಾಗಿ ತೋರಿಸಲಾಗಿರಲಿಲ್ಲ. ಮುಂದೆ ಜರ್ಮನಿಯ ರಾಬರ್ಟ್ ಕಾಖ್ (1876) ಕೆಲವು ರೋಗ ಪೀಡಿತ ಪ್ರಾಣಿಗಳ ರಕ್ತ ಮತ್ತು ಅವಯವಗಳಲ್ಲಿ ಅಂತಹ ಸೂಕ್ಷ್ಮ ಜೀವಕಣಗಳಿರುವುದನ್ನು ಶ್ರುತುಪಡಿಸಿದ. ಸೂಕ್ಷ್ಮದರ್ಶಕ ಯಂತ್ರ (MICRO-SCOPE) ದಡಿಯಲ್ಲಿ ರಕ್ತವನ್ನು ಪರೀಕ್ಷೆಗೊಳಪಡಿಸಿ ಸೂಕ್ಷ್ಮ ಜೀವಾಣುಗಳಿರುವುದನ್ನು ಪ್ರದರ್ಶಿಸಿದಾಗ ವೈದ್ಯರು ಮತ್ತು ವಿಜ್ಞಾನಿಗಳ ಕಣ್ಣು ತೆರೆಯುವಂತಾಯಿತು. ರಾಬರ್ಟ್ ಕಾಖ್ ಅಂತಹ ಜೀವಕಣಗಳನ್ನೂ ಕೆಲವು ಆಹಾರಾಂಶಗಳಿರುವ ಮಾಧ್ಯಮಗಳಲ್ಲಿ (CULTURE MEDIUM) ಬೆಳೆಸಿ, ವೃದ್ಧಿಯಾಗುವಂತೆ ಮಾಡಿದನು; ಅವುಗಳನ್ನು ಇತರ ಆರೋಗ್ಯಕರ ಪ್ರಾಣಿಗಳಿಗೆ ಸೋಂಕಿಸಿದಾಗ ಮೂಲ ಕಾಯಿಲೆ ಅವುಗಳಲ್ಲುಂಟಾಗುವುದನ್ನು ಪ್ರಾತ್ಯಕ್ಷತೆಗಳಿಂದ ತೋರಿಸಿದ. ಅಂದಿನಿಂದಲೇ ''ಮಿಣಜೀವಿ ಶಾಸ್ತ್ರ''(BACTERIOLOGY) ಎಂಬ ಹೊಸದೊಂದು ವಿಜ್ಞಾನ ಮಾರ್ಗವೆ ಉದಯಿಸಿತು. ಫ್ರಾನ್ಸ್‌ನಲ್ಲಿ ಜನಿಸಿದ

ಲೂಯಿ ಪ್ಯಾಶ್ಚರ್ (1822) ಇಂಗ್ಲೆಂಡಿನಲ್ಲಿ ಜನಿಸಿದ ಜೋಸೆಫ್ ಲಿಸ್ಟರ್ (1877) ಹಾಗೂ ಜರ್ಮನಿಯಲ್ಲಿ ಜನಿಸಿದ ರಾಬರ್ಟ್ ಕಾಖ್ (1843) ಈ ಹೊಸ ವಿಜ್ಞಾನದ ಆದ್ಯ ಪ್ರವರ್ತಕರೆನಿಸಿದರು. ಆ ಶತಮಾನ ಅಂತ್ಯವಾಗುವುದರೊಳಗೇ ನೂರಾರು ಸೂಕ್ಷ್ಮ ಜೀವಿಗಳ ಪತ್ತೆಯಾಗಿ, ಅವು ಹೇಗೆ ಬೇರೆ ಬೇರೆ ರೋಗಗಳಿಗೆ ಕಾರಣವಾಗುತ್ತಿವೆಯೆಂಬ ತಿಳಿವಳಿಕೆ ಉಂಟಾಯಿತು.

ಜೊಸೆಫ್ ಲಿಸ್ಟರ್ ಮಿಣಜೀವಿಗಳ ಇರುವಿಕೆಯನ್ನು ಪತ್ತೆ ಹಚ್ಚಲು ಕೈ ಹಾಕಿದಾಗ ಯಾವುದೇ ಮಾರ್ಗದರ್ಶನವಿಲ್ಲದೇ ಸಮುದ್ರ ಯಾನ ಕೈಗೊಂಡವನಂತಿತ್ತು ಅವನ ಪರಿಸ್ಥಿತಿ; ತನ್ನದೇ ಆದ ಸ್ವತಂತ್ರ ಮಾರ್ಗವನ್ನು ರೂಪಿಸಿಕೊಂಡು ಧೈರ್ಯದಿಂದ ಮುಂದೆ ಸಾಗುತ್ತಿದ್ದನು. ಈ ದಿಸೆಯಲ್ಲಿ ಅವನು ಮೊದಲು ಸಂಶೋಧನೆಗಾಗಿ ಆರಿಸಿಕೊಂಡದ್ದು ಸಸ್ಯ ವರ್ಗಕ್ಕೆ ಸೇರಿದ "ಟಾರುಲಾ" ಎಂಬ (TORULA) "ಹುದುಗು" ಅಥವಾ ಯೀಷ್ಟ್ (YEAST) ಬೂಸಲೊಂದರ (FUNGUS) ಮೂಲದಿಂದ ಬೆಳವಣಿಗೆಯಾಗುವ ಯೀಷ್ಟ್ ತನ್ನ ಸುತ್ತಲ ವಾತಾವರಣದಲ್ಲಿ ಆಗುವ ಬದಲಾವಣೆಗನುಸಾರವಾಗಿ ಹೇಗೆ ತನ್ನ ಬೆಳವಣಿಗೆಯಲ್ಲಿ ಮಾರ್ಪಾಡು ಮಾಡಿಕೊಳ್ಳುತ್ತದೆಂಬುದನ್ನು ಲಿಸ್ಟರ್ ಅದೆಷ್ಟು ಸಹನೆ ಮತ್ತು ಶ್ರದ್ಧೆಯಿಂದ ಪರಿಶೀಲಿಸಿ ದಾಖಲು ಮಾಡುತ್ತಿದ್ದನೆಂಬುದು ಅತ್ಯಂತ ಸೋಜಿಗದ ಸಂಗತಿ. ಹಗಲು ರಾತ್ರಿಗಳೆನ್ನದೆ ಲಿಸ್ಟರ್ ಯಿಾಷ್ಟ್‌ನ ಬೆಳವಣಿಗೆಯ ಹಂತಗಳನ್ನು ಪರೀಕ್ಷಿಸುತ್ತಿದ್ದ; ಅಲ್ಲಿ ಆಗುತ್ತಿದ್ದ ಬದಲಾವಣೆಗಳನ್ನು ಬರೆದುಕೊಂಡು ದಾಖಲು ಮಾಡುತ್ತಿದ್ದ. ಸೆಪ್ಟೆಂಬರ್ 12 (1872) ರಂದು ಅಂತಹ ಪ್ರಯೋಗವೊಂದನ್ನು ಬೆಳಗಿನ 1-30 ಗಂಟೆ, 6-00 ಗಂಟೆ, 10-45 ಗಂಟೆ, ಸಾಯಂಕಾಲ 5-30 ಗಂಟೆ, ಮತ್ತು ಮರುದಿನ ಬೆಳಗಿನ ಜಾವ 3-30 ಗಂಟೆಗಳಲ್ಲಿ ಉಂಟಾಗಿದ್ದ ಬದಲಾವಣೆಗಳನ್ನು ದಾಖಲಿಸಿದ್ದಾನೆ. ಪ್ರನಾಳಗಳಲ್ಲಿರಿಸಿದ್ದ ಅತಿ ಚಿಕ್ಕ ಬೂಸಲನ್ನು ವೀಕ್ಷಿಸುವುದೆಂದರೆ ಆಶ್ಚರ್ಯವಾಗಬಹುದು. ಅವುಗಳ ಆಕಾರದಲ್ಲಾಗುತ್ತಿದ್ದ ಬದಲಾವಣೆಗಳನ್ನೇ ಅಲ್ಲದೆ ಆಯಾ ಸಮಯದಲ್ಲಿ ಉದ್ಭವಿಸಬಹುದಾದ "ವಾಸನೆ" ಯನ್ನೂ ಗುರುತಿಸಲು ಸಹಾ ಅವನಿಗಾಗುತ್ತಿತ್ತೆನ್ನಬಹುದು; ಕೆಲವು ಸಂದರ್ಭಗಳಲ್ಲಿ ಯಾವ ವಾಸನೆಯೂ ಇರುತ್ತಿರಲಿಲ್ಲವೆಂಬುದನ್ನು ಕೂಡಾ ಗುರುತಿಸಿದ್ದ. ಇದರಿಂದ ಪ್ರತಿ ಮಿಣಜೀವಿ ಬೆಳೆದು ವೃದ್ಧಿಯಾಗುವ ಸಂದರ್ಭದಲ್ಲಿ ದುರ್ವಾಸನೆ ಇರಲೇ ಬೇಕೆಂಬ ನಿಯಮವಿಲ್ಲವೆಂಬುದೂ ಶ್ರುತಪಟ್ಟಂತಾಯಿತು. ಆಂಟಿಸೆಪ್ಟಿಕ್

ನಿಯಮಗಳಿಗನುಸಾರ ವಾರ್ಡುಗಳಲ್ಲಿ ಗಾಯಗಳಿಗೆ ಬ್ಯಾಂಡೇಜು ಮಾಡುತ್ತಿದ್ದಾಗ ಕೆಲವು ಸಾರಿ ಯಾವುದೇ ವಾಸನೆ ಇರುತ್ತಿರಲಿಲ್ಲ. ಆದುದರಿಂದ ಅಲ್ಲಿ ''ಕೊಳೆಯುವಿಕೆ'' (PUTREFACTION) ಆಗಿರುತ್ತಿರಲಿಲ್ಲವೆಂಬುದನ್ನು ಸಾಧಿಸಬಹುದಾಗಿತ್ತು. (ಆಲ್ಬುಮಿನ್ ALBUMIN) ನಂತಹ ವಸ್ತುವಿನಲ್ಲಿ ವಾಸನೆ ಇಲ್ಲದೇ ಹುದುಗೇಳಬಹುದೆಂಬುದನ್ನು ಕಂಡು ಹಿಡಿದನಲ್ಲದೇ, ಅಂತಹ ಸಂದರ್ಭಗಳಲ್ಲಿ 'ಕೊಳೆತ' ಎಂಬ ಶಬ್ದವನ್ನು 'ಇನ್‌ಫೆಕ್ಷನ್' (INFECTION) ಅಥವಾ 'ಸೋಂಕು' ಎಂದು ಪರಿಗಣಿಸಬೇಕೆಂದು ತೀರ್ಮಾನಿಸಿದ. ಲಿಸ್ಟರ್ ಆ ಕಾಲದಲ್ಲಿ ಅತ್ಯಂತ ಮುತುವರ್ಜಿಯಿಂದ ಜರುಗಿಸುತ್ತಿದ್ದ ಸಂಶೋದನೆಗಳ ಲಿಖಿತ ದಾಖಲೆ ಮತ್ತು ಚಿತ್ರಗಳ ನಾಲ್ಕು ಸಂಪುಟಗಳನ್ನು ಇಂಗ್ಲೆಂಡಿನ ಸರ್ಜನ್‌ರ ರಾಯಲ್ ಕಾಲೇಜಿನ ಪುಸ್ತಕ ಬಂಡಾರದಲ್ಲಿ ಪ್ರದರ್ಶನಕ್ಕಾಗಿ ಇಟ್ಟಿರುವುದನ್ನು ಇಂದಿಗೂ ನೋಡಬಹುದು.

## ೧೧.೧ ಪ್ಯಾಶ್ಚರ್ ನೊಡನೆ ಪತ್ರವ್ಯವಹಾರ

ಸುಮಾರು ಹತ್ತು ವರ್ಷಗಳಿಂದ ಲೂಯಿ ಪ್ಯಾಶ್ಚರ್ ದ್ರಾಕ್ಷಾರಸದಲ್ಲಿ ಹುದುಗೇಳುವುದಕ್ಕೆ ವಾತಾವರಣದಲ್ಲಿರಬಹುದಾದ ಮಿಣಿಜೀವಿಗಳು ಕಾರಣವೆಂಬ ತತ್ವವನ್ನು, ಗಾಯಗಳಲ್ಲಿ ಕೀವಾಗುವುದಕ್ಕೂ ಹೋಲಿಕೆಯಿಂದ ಲಿಸ್ಟರ್ ಕಾರ್ಯೋನ್ಮುಖವಾಗಿದ್ದನಷ್ಟೆ. ಅದರಿಂದ ಬಹಳಷ್ಟು ಸಾಧನೆಗಳನ್ನೂ ಮಾಡಿ ಒಳ್ಳೆಯ ಪರಿಣಾಮಗಳನ್ನು ಪಡೆಯುವಲ್ಲಿ ಯಶಸ್ವಿಯೂ ಆಗಿದ್ದ. ಆದರೆ ಪ್ಯಾಶ್ಚರ್ ತನ್ನ ರಾಸಾಯನಿಕ ಕ್ಷೇತ್ರವಲ್ಲದೆ ಇನ್ನಿತರ ವಲಯಗಳಲ್ಲಿ ಅಷ್ಟೇನೂ ಪ್ರಖ್ಯಾತಿ ಪಡೆದಿರಲಿಲ್ಲ. ಆದರೂ ಅವನು ನಿರೂಪಿಸಿದ ತತ್ವಗಳ ಮುಂದಿನ ಬೆಳೆವಣಿಗೆಗಳಿಂದ ವೈದ್ಯಕೀಯ ಕ್ಷೇತ್ರಕ್ಕೆ ಆಗುತ್ತಿರುವ ಉಪಕಾರಗಳ ಬಗೆಗೆ ಪ್ಯಾಶ್ಚರ್‌ಗೆ ತಿಳಿಸಬೇಕೆಂಬ ಅಭಿಲಾಷೆ ಲಿಸ್ಟರ್‌ಗಿತ್ತು. ಆ ತನಕ ವೈಯಕ್ತಿಕವಾಗಿ ಅಪರಿಚಿತನಾಗಿದ್ದ ಲೂಯಿ ಪ್ಯಾಶ್ಚರ್‌ಗೆ 1874 ರ ಫೆಬ್ರವರಿ 13 ರಂದು ಪತ್ರ ಬರೆದ. ಅದರಲ್ಲಿ ಅವನ ತತ್ವಗಳ ಸಮಾನತೆ, ಗಾಯಗಳಲ್ಲಿ ಕೀವಾಗುವುದಕ್ಕೂ ಕಾರಣವಾಗಬಹುದೆಂಬ ಅಂದಾಜಿನಿಂದ ತಾನು ಮಾನವರ ಮೇಲೆ ಕೈಗೊಂಡ ಪ್ರಯೋಗಗಳು ಮತ್ತು ಅವುಗಳ ಒಳ್ಳೆಯ ಫಲಿತಾಂಶಗಳನ್ನು ವಿವರಿಸಿದ್ದ. ಅದರಿಂದ ತನಗಾದ ಉಪಕಾರಗಳ ಬಗೆಗೆ ಪ್ಯಾಶ್ಚರ್‌ಗೆ ತನ್ನ ಕೃತಜ್ಞತೆಗಳನ್ನು ತಿಳಿಸಿದ್ದ. ಯೀಷ್ಟ್‌ಗಳ ಬಗೆಗೆ ಬರೆದಂತೆ ತಾನು ಮಿಣಿಜೀವಿಗಳ ಬಗೆಗೆ ನಡೆಸಿದ ಸಂಶೋದನೆಗಳನ್ನು ಕುರಿತು ಬರೆದಿದ್ದ ಲೇಖನಗಳನ್ನು ಕಳುಹಿಸಿದ್ದ. ಹುದುಗೇಳುವ

ಕ್ರಿಯೆಯ ಬಗೆಗೆ ಪ್ಯಾಶ್ಚರ್ ಊಹಿಸಲಾಗಿದ್ದ ಸೂಕ್ಷ್ಮ ಜೀವಾಣುಗಳ ತತ್ವವನ್ನು ತಾನು ಗಾಯಗಳಲ್ಲಿ ಕೀವಾಗುವ ಪರಿಸ್ಥಿತಿಗೂ ವಿಸ್ತರಿಸಿದ್ದು, ಗಾಯಗಳಿಗೆ ಅವು ಸೇರದಂತೆ ಮತ್ತು ಸೇರಿದರೆ ನಾಶ ಮಾಡುವ ಸಲುವಾಗಿ ಅವನು ನಿರೂಪಿಸಿದ ಆಂಟಿಸೆಪ್ಟಿಕ್ ನಿಯಮಗಳ ಬಗೆಗೆ ವಿವರಣೆ ನೀಡಿದ್ದ. ಪ್ಯಾಶ್ಚರ್‌ನ ಹುದುಗೇಳುವ ಕ್ರಿಯೆ ಅವನಿಗೆ ಸ್ಫೂರ್ತಿ ನೀಡಿ, ಅದರ ಆಧಾರದ ಮೇಲೆ ನಿರೂಪಿಸಿದ ಆಂಟಿಸೆಪ್ಟಿಕ್ ನಿಯಮಗಳು ಅದೆಷ್ಟು ಉಪಕಾರ ಮಾಡುತ್ತಿವೆ ಎಂದು ಹೇಳಿ ಆ ಬಗ್ಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸಿದ್ದ. ಪ್ಯಾಶ್ಚರ್ ವಿಜ್ಞಾನ ದ ಹಲವು ಕ್ಷೇತ್ರಗಳಲ್ಲಿ ಸಂಶೋಧನೆಗಳನ್ನು ಜರುಗಿಸಿ ಮಾನವ ಕುಲಕ್ಕೆ ಆಗುತ್ತಿರುವ ಉಪಕಾರಕ್ಕೆ ಶ್ಲಾಘನೆಯ ಮಾತುಗಳನ್ನಾಡಿದ್ದ. ಒಂದು ಸಾರಿ ಎಡಿನ್ ಬರೋಗೂ ಭೇಟಿ ನೀಡುವಂತೆ ಆಹ್ವಾನಿಸಿದ್ದ.

ಪತ್ರವನ್ನು ಓದಿದ ಪ್ಯಾಶ್ಚರ್‌ಗೆ ತುಂಬಾ ಸಂತೋಷವಾಯಿತು ಸದಾ ಶಸ್ತ್ರಚಿಕಿತ್ಸೆ ಮಾಡುವುದರಲ್ಲಿ ಮಗ್ನನಾಗಿರುವ ಶಸ್ತ್ರವೈದ್ಯನೊಬ್ಬ ಸಂಶೋಧನೆಗಳನ್ನು ಜರುಗಿಸುತ್ತಿರುವುದು ತುಂಬಾ ಮೆಚ್ಚಿಗೆಯಾಯಿತು. ಲಿಸ್ಟರ್‌ನ ಮೇಲೆ ತನಗುಂಟಾದ ಗೌರವ ಭಾವನೆಯನ್ನು ವ್ಯಕ್ತಪಡಿಸಿ ಆತ್ಮೀಯವಾಗಿ ಉತ್ತರ ಬರೆದಿದ್ದ. ಮುಂದೆ ಅವರಿಬ್ಬರ ನಡುವೆ ಎಡಬಿಡದೆ ಪತ್ರ ವ್ಯವಹಾರಗಳು ನಡೆಯುತ್ತಲೇ ಇದ್ದವು.

## ೧೧.೨ ವಿದೇಶ ಪ್ರಯಾಣ

ಸ್ವದೇಶದಲ್ಲಿ ಆಂಟಿಸೆಪ್ಟಿಕ್ ನಿಯಮಗಳಿಗೆ ವಿರೋಧವಿದ್ದರೂ ಯುರೋಪಿನ ಹಲವು ರಾಷ್ಟ್ರಗಳಲ್ಲಿ ವೈದ್ಯರು ಆ ನಿಯಮಗಳನ್ನು ಪಾಲಿಸಿ ಒಳ್ಳೆಯ ಫಲಿತಾಂಶಗಳನ್ನು ಪಡೆದಿದ್ದರು. ಯುರೋಪಿನಾದ್ಯಂತ ವೈದ್ಯರಿಗೆಲ್ಲಾ ಜೋಸೆಫ್ ಲಿಸ್ಟರ್ ಬಗೆಗೆ ತುಂಬಾ ಪ್ರೀತಿ ಗೌರವಗಳಿದ್ದವು. ಹಲವು ವಿಶ್ವವಿದ್ಯಾಲಯ ಮತ್ತು ಆಸ್ಪತ್ರೆಗಳಿಗೆ ಲಿಸ್ಟರ್ ಭೇಟಿ ಕೊಡಬೇಕೆಂದು ಆಹ್ವಾನಗಳು ಬರುತ್ತಲೇ ಇದ್ದವು. ಅಂತೂ 1875 ರಲ್ಲಿ ಲಿಸ್ಟರ್ ದಂತಿಗಳು ಯುರೋಪಿನತ್ತ ಪ್ರಯಾಣ ಮಾಡಿದರ. ಮೊದಲು ಇಟಲಿಗೆ ತೆರಳಿ ಸ್ವಲ್ಪ ಸಮಯ ವಿಶ್ರಾಂತಿ ಪಡೆದರು. ಮುಂದೆ ವಿಯೆನ್ನಾ, ಲಿಪ್‌ಜಿಗ್ ನಗರಗಳಿಗೆ ಭೇಟಿ. ವೈದ್ಯರು ಮತ್ತು ವೈದ್ಯ ವಿದ್ಯಾರ್ಥಿಗಳಿಗೆ ತಮ್ಮ ಆರಾಧ್ಯ ದೇವರೇ ಪ್ರತ್ಯಕ್ಷವಾದಂತಾಯಿತು. ಥಿರ್ಯಶ್ವರ ಮನೆಯಲ್ಲಿ ನೀಡಿದ ಔತಣ ಕೂಟ ಮರೆಯಲಾಗದ ಅನುಭವ

ಎಂದು ಆಗ್ನೀಸ್ ಲಿಸ್ಟರ್ ತನ್ನ ದಿನಚರಿಯಲ್ಲಿ ದಾಖಲು ಮಾಡಿದ್ದಾಳೆ. ಸಾಕ್ಸೋನಿ ದೇಶದ ರಾಜ, ಲಿಸ್ಟರ್‌ನ ಅಭಿಮಾನಿಗಳಲ್ಲೊಬ್ಬರಾಗಿ ಬಿಟ್ಟರು. ಅವರ ಸಮ್ಮುಖದಲ್ಲೇ ಆಂಟಿಸೆಪ್ಟಿಕ್ ನಿಯಮಗಳ ಪ್ರಕಾರ ಶಸ್ತ್ರಚಿಕಿತ್ಸೆ ಮಾಡಿ ತೋರಿಸಿದ. ಒಟ್ಟಿನಲ್ಲಿ ಯುರೋಪಿನ ಭೇಟಿ ಒಂದು ವಿಜಯೋತ್ಸವವೇ ಆಯಿತು.

ಎಡಿನ್ ಬರೋಗೆ ಹಿಂದಿರುಗಿದ ಸ್ವಲ್ಪ ಸಮಯದಲ್ಲೇ ಲಿಸ್ಟರ್ ಅಮೆರಿಕಾಕ್ಕೆ ಸಂದರ್ಶಿಸಲು ಆಹ್ವಾನ ಬಂದಿತು. ಫಿಲಡೆಲ್ಫಿಯಾದಲ್ಲಿ ಜರುಗಲಿದ್ದ ಇಂಟರ್ ನ್ಯಾಷನಲ್ ಮೆಡಿಕಲ್ ಕಾಂಗ್ರೆಸ್‌ಗೆ ಲಿಸ್ಟರ್ ದಂಪತಿಗಳಿಗೆ ಆಹ್ವಾನ ಬಂತು (1876). ಹಡಗಿನಲ್ಲಿ ಅಮೇರಿಕಾ ತಲುಪಿದ ಲಿಸ್ಟರ್ ದಂಪತಿಗಳು ಬೋಸ್ಟನ್, ನ್ಯೂಯಾರ್ಕ್, ಫಿಲಡೆಲ್ಫಿಯಾಗಳಿಗೆ ಭೇಟಿಕೊಟ್ಟರು. ಹೋದ ಕಡೆಗಳಲ್ಲೆಲ್ಲಾ ಲಿಸ್ಟರ್ ಆಂಟಿಸೆಪ್ಟಿಕ್ ತತ್ವಗಳನ್ನು ಪ್ರವಾದಿಯಂತೆ ಪ್ರಚಾರ ಮಾಡಿದ.

ಫಿಲಡೆಲ್ಫಿಯಾ ಮೆಡಿಕಲ್ ಕಾಂಗ್ರೆಸ್‌ನಲ್ಲಿ ಶಸ್ತ್ರಚಿಕಿತ್ಸಾ ವಿಭಾಗದ ಚರ್ಚಾಗೋಷ್ಠಿಗೆ ಲಿಸ್ಟರ್‌ಗೇ ಅಧ್ಯಕ್ಷ ಸ್ಥಾನ. ಅಧ್ಯಕ್ಷ ಭಾಷಣಕ್ಕೆ ಸುಮಾರು ಮೂರು ಗಂಟೆಗಳಷ್ಟು ಕಾಲ ಹಿಡಿಯಿತು ಆಸ್ಪತ್ರೆಗಳಲ್ಲಿ ರೋಗಿಗಳ ಗಾಯದಲ್ಲಿ ಕೀವಾಗಿ, ನಂಜಿನ ಜ್ವರದಿಂದ ಅವರು ಬಳಲುತ್ತಿದ್ದ ಬವಣೆಗಳನ್ನು ಮೊದಲು ವಿವರಿಸಿದ. ಫ್ರಾನ್ಸಿನ ಲೂಯಿ ಪ್ಯಾಶ್ಚರ್ ದ್ರಾಕ್ಷಾರಸದಲ್ಲಿ ಹುದುಗೇಳುವ ಕ್ರಿಯೆಯ ಬಗೆಗೆ ನಿರೂಪಿಸಿದ ಸಿದ್ಧಾಂತವನ್ನು ತಿಳಿಸಿದ. ತಾನು ಗಾಯಗಳಲ್ಲಿ ಕೀವಾಗುವುದಕ್ಕೂ ವಾತಾವರಣದಲ್ಲಿರಬಹುದಾದ ಸೂಕ್ಷ್ಮ ಜೀವಾಣುಗಳೇ ಕಾರಣವೆಂಬುದನ್ನು ಊಹಿಸಿದ್ದು; ಅವುಗಳ ನಿವಾರಣೆಗೆ ಕಾರ್ಬಾಲಿಕ್ ಆಮ್ಲದ ಲೇಪನ ಮತ್ತು ಆಂಟಿಸೆಪ್ಟಿಕ್ ನಿಯಮಗಳ ಆಚರಣೆಯನ್ನು ನಿರೂಪಿಸಿದ್ದನ್ನು ವಿವರಿಸಿದ; ಮತ್ತು ಆ ನಿಯಮಗಳ ಪಾಲನೆಯಿಂದ ದೊರೆತ ಒಳ್ಳೆಯ ಫಲಿತಾಂಶಗಳನ್ನು ಅಂಕಿಸಂಖ್ಯೆಗಳಿಂದ ಶ್ರುತಪಡಿಸಿದ. ಮಗುವಿನ ತಲೆಯಲ್ಲಿರುವ ಹೇನುಗಳನ್ನು ತೆಗೆಯಲು ಹೇಗೆ ಕ್ರಿಮಿನಾಶಕ ಮದ್ದುಗಳನ್ನು ಬಳಸುತ್ತೇವೆಯೋ ಹಾಗೆ ಕಾರ್ಬಾಲಿಕ್ ಆಮ್ಲ ಸೂಕ್ಷ್ಮ ಜೀವಾಣುಗಳನ್ನು ನಾಶ ಮಾಡುತ್ತದೆಂಬ ಸಾದೃಶ್ಯವನ್ನು ಹೇಳಿ ಸಭಿಕರ ಮೆಚ್ಚುಗೆ ಗಳಿಸಿದ. ಭಾಷಣ ಶುರು ಮಾಡುವ ಮೊದಲು ಪ್ಯಾಶ್ಚರ್ ಹುದುಗೇಳುವ ಕ್ರಿಯೆಗೆ ಮಾಡಿತೋರಿಸುತ್ತಿದ್ದ ಪ್ರಯೋಗಗಳನ್ನೂ ಪ್ರದರ್ಶಿಸಿದ್ದ.

ಅಮೆರಿಕೆಯಲ್ಲಿ ಕೆಲವು ಕಡೆ ಕಾರ್ಬಾಲಿಕ್ ಆಮ್ಲವನ್ನು ಬಳಸುವವರಿದ್ದರೂ, ಯುರೋಪಿನಂತೆ ಯಾರೂ ಕಟ್ಟುನಿಟ್ಟಾಗಿ ಆಚರಿಸಿರಲಿಲ್ಲ. ಆದುದರಿಂದ ಫಲಿತಾಂಶ ಅಷ್ಟೊಂದು ಪರಿಣಾಮಕಾರಿಯಾಗಿರಲಿಲ್ಲ. ಲಿಸ್ಟರ್‌ನ ಭಾಷಣ ಅವರಲ್ಲಿದ್ದ ಅನುಮಾನಗಳನ್ನು ಪರಿಹರಿಸಲು ಸಹಕಾರಿಯಾಯಿತು. ಭಾಷಣ ಮುಗಿದ ನಂತರ ಸಭಿಕರೆಲ್ಲಾ ಎದ್ದು ನಿಂತು ದೀರ್ಘಕರತಾಡನ ಮಾಡಿದರು. ಮರು ದಿನ ಬೋಸ್ಟನ್ ನಗರದ ವೈದ್ಯಕೀಯ ಪತ್ರಿಕೆ ಲಿಸ್ಟರ್‌ನ ವ್ಯಕ್ತಿತ್ವ, ರೂಪ, ನಡತೆ ಮತ್ತು ಭಾಷಣಗಳನ್ನು ಹಾಡಿ ಹೊಗಳಿ ಲೇಖನ ಬರೆದಿತ್ತು. ಮುಂದೆ ಸಾನ್‌ಫ್ರಾನ್ಸಿಸ್‌ಕೋ, ಚಿಕಾಗೋ ಮುಂತಾದ ನಗರಗಳಿಗೆ ಭೇಟಿಯಿತ್ತು ಲಿಸ್ಟರ್ ದಂಪತಿಗಳು ಇಂಗ್ಲೆಂಡಿಗೆ ಹಿಂದಿರುಗಿದರು.

# ೧೨. ಲಂಡನ್

ಜೋಸೆಫ್ ಲಿಸ್ಟರ್ 1877ರ ಸಮಯಕ್ಕೆ 50 ವಸಂತಗಳನ್ನು ಕಳೆದ ಜೀವನ ಕಾಲ. ಶಸ್ತ್ರ ಚಿಕಿತ್ಸಾ ವೃತ್ತಿಯಲ್ಲಿ ಸಾಕಷ್ಟು ಸಾಧನೆ ಮಾಡಿ, ತನ್ನದೇ ಆದ ವಿಶಿಷ್ಟ ವ್ಯಕ್ತಿತ್ವವನ್ನು ಗಳಿಸಿ ಕೊಂಡದ್ದ. ಆಂಟಿಸೆಪ್ಟಿಕ್ ನಿಯಮದಂತಹ ಕ್ರಾಂತಿಕಾರಿ ತತ್ವವನ್ನು ಪ್ರತಿಪಾದಿಸಿ ಯಶಸ್ವಿಯಾಗಿ ಜಾರಿಗೆ ತಂದಂತಹ ಹಿರಿಮೆಯೂ ಅವನದಾಗಿತ್ತು. ಯುರೋಪು ಮತ್ತು ಅಮೆರಿಕಾಗಳಲ್ಲಿ ಅದನ್ನು ಆಚರಿಸಿದವರು ಒಳ್ಳೆಯ ಪರಿಣಾಮ ಪಡೆದಿದ್ದರು; ಅವರೆಲ್ಲರ ಆರಾಧ್ಯ ದೇವರಂತಾಗಿದ್ದ. ಆದರೆ ಸ್ವದೇಶದಲ್ಲಿ ಅವನ ತತ್ವಗಳನ್ನು ಆಚರಿಸುವಲ್ಲಿ ಅಸಡ್ಡೆಯ ಭಾವನೆ ಇನ್ನೂ ತೊಲಗಿರಲಿಲ್ಲ; ಕೆಲವರು ಅವನ ತತ್ವಗಳನ್ನು ನಂಬಲು ಇನ್ನೂ ತಯಾರಿರಲಿಲ್ಲ; ಮತ್ತು ಕೆಲವರು ಪುರಾತನ ಕಾಲದಿಂದ ರೂಢಿಯಲ್ಲಿದ್ದ ಪದ್ಧತಿಗಳ ದಾಸರಾಗಿದ್ದರು. ಲಿಸ್ಟರ್ ಪ್ರತಿಪಾದಿಸುತ್ತಿದ್ದ ಸೂಕ್ಷ್ಮ ಜೀವಾಣುಗಳ ಇರುವಿಕೆಯನ್ನು ಮತ್ತೆ ಕೆಲವರು ಅರ್ಥ ಮಾಡಿಕೊಂಡಿರಲಿಲ್ಲ. ಹಳೇ ಕಾಲದ ವೈದ್ಯ ಲೋಕದ ಅಧ್ವರ್ಯುಗಳೆನಿಸಿದವರು ಯಾವುದೇ ಹೊಸ ವಿಷಯಗಳ ಪ್ರಸ್ತಾಪ ಬಂದಾಗ ತಮ್ಮೆಲ್ಲಾ ಪ್ರಭಾವವನ್ನು ಉಪಯೋಗಿಸಿ ವಿರೋಧಿಸುತ್ತಿದ್ದರು. ಕೆಲವು ಯುವ ವೈದ್ಯರಿಗೆ ಲಿಸ್ಟರ್‌ನ ತತ್ವಗಳು ಹಿಡಿಸಿದ್ದರೂ ಸ್ವತಂತ್ರವಾಗಿ ಅವನ್ನು ಜಾರಿಗೆ ತರುವ ಅವಕಾಶಗಳಿರುತ್ತಿರಲಿಲ್ಲ. ಹೀಗಾಗಿ ಆಂಟಿಸೆಪ್ಟಿಕ್ ನಿಯಮಗಳನ್ನು ಇಂಗ್ಲೆಂಡಿನಲ್ಲೇ ವ್ಯಾಪಕವಾಗಿ ಪ್ರಚಾರಕ್ಕೆ ಬಂದಿರಲಿಲ್ಲ. ಈ ಪರಿಸ್ಥಿತಿಯಲ್ಲಿ ಲಂಡನ್‌ನಂತಹ ಮಹಾ ನಗರದ ಆಸ್ಪತ್ರೆಯಲ್ಲಿ ತನಗೆ ಕಾರ್ಯ ನಿರ್ವಹಿಸುವ ಅವಕಾಶ ದೊರೆತರೆ, ಆಂಟಿಸೆಪ್ಟಿಕ್ ನಿಯಮಗಳು ಹೆಚ್ಚು ಹೆಚ್ಚು ವೈದ್ಯರಿಗೆ ಪ್ರತ್ಯಕ್ಷವಾಗಿ ಪ್ರದರ್ಶಿಸಲು ಸಾಧ್ಯವಾಗಬಹುದೆಂಬ ಅಭಿಲಾಷೆ ಬಹಳ ಸಮಯದಿಂದಿತ್ತು. ಅಂತಹ ಒಂದು ಸಂದರ್ಭಕ್ಕಾಗಿ ಹಾತೊರೆಯುತ್ತಿದ್ದನೆಂದೇ ಹೇಳಬಹುದು. ಆ ಒಂದು ಅವಕಾಶ 1877 ರಲ್ಲಿ ಒದಗಿ ಬಂತು.

ಲಿಸ್ಟರ್ ವೈದ್ಯಕೀಯ ತರಬೇತಿ ಮತ್ತು ಪದವಿ ಗಳಿಸಿದ ಯೂನಿವರ್ಸಿಟಿ ಮೆಡಿಕಲ್ ಸ್ಕೂಲ್ ಅಲ್ಲದೆ, ಕಿಂಗ್ಸ್ ಕಾಲೇಜು ಮತ್ತು ಅದಕ್ಕೆ ಹೊಂದಿಕೊಂಡ ಆಸ್ಪತ್ರೆಯೂ ಇತ್ತು. ಅಲ್ಲಿಯ ಶಸ್ತ್ರಚಿಕಿತ್ಸಾ ವಿಭಾಗದಲ್ಲಿ ಸರ್ ವಿಲಿಯಂ

ಫರ್ಗುಸನ್ ಎಂಬ ಖ್ಯಾತ ಶಸ್ತ್ರವೈದ್ಯರು ಕಳೆದ 37 ವರ್ಷಗಳಿಂದಲೂ ಮುಖ್ಯಸ್ಥರಾಗಿದ್ದರು. ವೃತ್ತಿಯಲ್ಲಿ ಒಳ್ಳೆಯ ದಕ್ಷತೆಗೆ ಹೆಸರಾಗಿದ್ದರಲ್ಲದೆ ವಿದ್ಯಾರ್ಥಿಗಳು ಮತ್ತು ಸಾರ್ವಜನಿಕ ಕ್ಷೇತ್ರದಲ್ಲೂ ಜನಾನುರಾಗಿಗಳಾಗಿದ್ದರು. ಆ ವರ್ಷ ಅವರು ನಿಧನರಾದಾಗ, ಆ ಜಾಗಕ್ಕೆ ಅವರಷ್ಟೇ ಪ್ರಭಾವಶಾಲಿ ಯಾದವರನ್ನು ನೇಮಿಸುವ ಪ್ರಯತ್ನಗಳು ನಡೆಯುತ್ತಿದ್ದವು, ಆಡಳಿತ ವರ್ಗದಲ್ಲಿ ಕೆಲವರು ಫರ್ಗುಸನ್‌ರ ಸಹಾಯಕರಾಗಿದ್ದ ಜಾನ್‌ವುಡ್ ಎಂಬುವವರಿಗೆ ಬಡ್ತಿ ನೀಡಬೇಕೆಂದಿದ್ದರು. ಎಡಿನ್ ಬರೋದಲ್ಲಿ ಜೋಸೆಫ್ ಲಿಸ್ಟರ್, ವೃತ್ತಿ ಮತ್ತು ಘನತೆಯಲ್ಲಿ ಹೆಸರುವಾಸಿಯಾಗಿದ್ದ. ಅವನೇ ಈ ಸ್ಥಾನಕ್ಕೆ ಸೂಕ್ತ ವ್ಯಕ್ತಿಯೆಂದು ಮತ್ತೆ ಕೆಲವರ ಒಲವಿತ್ತು. ಲಿಸ್ಟರ್‌ನ ಅಭಿಮಾನಿಗಳು, ಅವನು ಆ ಸ್ಥಾನಕ್ಕೆ ಅಭ್ಯರ್ಥಿಯಾಗಬೇಕೆಂದು ಸೂಚಿಸಿದರು. ಲಿಸ್ಟರ್ ಅಭ್ಯರ್ಥಿಯಾಗಿ ಅರ್ಜಿ ಹಾಕಿದನಲ್ಲದೇ ತನ್ನದೇ ಆದ ಕೆಲವು ಷರತ್ತುಗಳನ್ನು ಹಾಕಿದನು. ಇವೆಲ್ಲಾ ಗುಟ್ಟಾಗಿ ನಡೆಯುತ್ತಿದ್ದರೂ, ಲಿಸ್ಟರ್ ಲಂಡನ್ನಿಗೆ ಹೋಗಬಹುದೆಂಬ ಸುದ್ದಿ ವಿದ್ಯಾರ್ಥಿಗಳಿಗೆ ಅದು ಹೇಗೋ ತಿಳಿದು ಹೋಯಿತು. ಲಿಸ್ಟರ್‌ನಂತಹ ಶ್ರೇಷ್ಠ ಗುರು ಮತ್ತು ಮಹಾನ್ ವ್ಯಕ್ತಿಯನ್ನು ಬಿಟ್ಟುಕೊಡಲು ಅವರು ತಯಾರಿರಲಿಲ್ಲ. ಸುಮಾರು 700 ಜನ ಅಭ್ಯರ್ಥಿಗಳು ಮನವಿಯೊಂದನ್ನು ಬರೆದು ಲಿಸ್ಟರ್‌ಗೆ ಅರ್ಪಿಸಿದರು.

ವಿದ್ಯಾರ್ಥಿಗಳ ಪ್ರೀತಿ ಗೌರವಗಳು ಅವನಿಗೆ ಸಂತಸ ಉಂಟು ಮಾಡುವ ಸಂಗತಿಯಾಗಿದ್ದರೂ, ಲಂಡನ್ನಿಗೆ ಹೋಗುವುದು ಕೆಲವು ಕಾರಣಗಳಿಂದ ಅನಿವಾರ್ಯವಾಗಿತ್ತು. ವಿದ್ಯಾರ್ಥಿಗಳ ಬಗೆಗೆ ಅವನೊಂದು ದಿನ ತರಗತಿಯಲ್ಲಿ ಪ್ರಸ್ತಾಪಿಸಿದ. ಲಂಡನ್ನಿನ ಆಸ್ಪತ್ರೆಗಳಲ್ಲಿ ಆಂಟಿಸೆಪ್ಟಿಕ್ ನಿಯಮಗಳ ಪ್ರಚಾರದ ಅವಶ್ಯಕತೆ ಇರುವುದರಿಂದ ತಾನು ಅಲ್ಲಿಗೆ ಹೋಗಲೇ ಬೇಕಾಗುತ್ತದೆಂದು ತಿಳಿಸಿದ. ಎಲ್ಲಕ್ಕಿಂತ ಮಿಗಿಲಾಗಿ ಲಂಡನ್‌ನಲ್ಲಿ ಶಸ್ತ್ರ ಚಿಕಿತ್ಸಾ ವಿಷಯಗಳ ಬೋಧನೆ ಅಷ್ಟೊಂದು ಸಮಂಜಸವಾಗಿಲ್ಲವಾದುದರಿಂದ ತಾನು ಅಲ್ಲಿಗೆ ಹೋಗುವುದು ಸೂಕ್ತವೆಂದು ತಿಳಿಸಿ, ವಿದ್ಯಾರ್ಥಿಗಳ ಮನ ಒಲಿಸಿಕೊಂಡಿದ್ದ. ಲಂಡನ್‌ನ ಮೆಡಿಕಲ್ ಸ್ಕೂಲ್‌ಗಳಲ್ಲಿ ಶಸ್ತ್ರವೈದ್ಯರ ಬೋಧನೆಯ ಬಗೆಗೆ ಪ್ರಸ್ತಾಪಿಸಿದ್ದು ಮರುದಿನ ಪತ್ರಿಕೆಗಳಲೆಲ್ಲಾ ಪ್ರಕಟವಾಯಿತು. ಈ ಬಗೆಗೆ ಲಿಸ್ಟರ್ ಹೇಳಿಕೆ ಸರಿಯಲ್ಲವೆಂದು ಆಕ್ಷೇಪಣೆಗಳು ಪ್ರಕಟವಾದವು. ಲಿಸ್ಟರ್ ಅವುಗಳಿಗೆಲ್ಲಾ ಉತ್ತರ ನೀಡಿ ಲಂಡನ್ನಿನ ಶಸ್ತ್ರವೈದ್ಯರ ಬೋಧನಾ ಸಾಮರ್ಥ್ಯವನ್ನು

ಟೀಕಿಸಿಲ್ಲವೆಂತಲೂ, ಅಲ್ಲಿ ಮೊದಲಿನಿಂದಲೂ ಜಾರಿಯಲ್ಲಿರುವ ಬೋಧನಾ ವಿಧಾನ - ರೋಗಿಗಳನ್ನು ಪ್ರತ್ಯಕ್ಷವಾಗಿ ಇಟ್ಟುಕೊಳ್ಳದೆ, ಕಾಯಿಲೆಗಳ ಬಗೆಗೆ ಭಾಷಣ ಮಾಡುವ ವಿಷಯವನ್ನು ಪ್ರಸ್ತಾಪಿಸಿರುವುದಾಗಿ ಉತ್ತರ ನೀಡಿ, ತನ್ನ ನಿಲುವನ್ನು ಸಮರ್ಥಿಸಿಕೊಂಡ. ಆದರೂ ಈ ದಿಸೆಯಲ್ಲಿ ಉದ್ಭವವಾದ ವಿವಾದದಿಂದ ಲಂಡನ್ನಿನಲ್ಲಿ ಅವನಿಗೆ ನಿಯೋಜಿತವಾದ ಹುದ್ದೆ ದಕ್ಕಲಿಲ್ಲ. ಮೊದಲು ಕೈ ಬಿಡಬೇಕೆಂದಿದ್ದ ಜಾನ್‌ವುಡ್‌ರನ್ನೇ ಆ ಸ್ಥಾನಕ್ಕೆ ನೇಮಕ ಮಾಡಿದರು. ಆದರೂ ಜೋಸೆಫ್ ಲಿಸ್ಟರ್ ನಂತಹ ಪ್ರತಿಭಾವಂತ ಶಸ್ತ್ರವೈದ್ಯರೊಬ್ಬರು ಲಂಡನ್ನಿನಲ್ಲಿರುವುದು ಶ್ರೇಯಸ್ಕರವೆಂದು ಆಡಳಿತ ಮಂಡಳಿಯವರು ಅವನನ್ನು ಮತ್ತೆ ಆಹ್ವಾನಿಸಿದರು. ಅವನಿಗೋಸ್ಕರ ಹೆಚ್ಚುವರಿ ಕ್ಲಿನಿಕಲ್ ಸರ್ಜರಿ ಪ್ರೊಫೆಸರ್ ಹುದ್ದೆಯನ್ನು ಹೊಸದಾಗಿ ಸೃಷ್ಟಿಸಿದರು. ಅದಕ್ಕೆ ಲಿಸ್ಟರ್ ನೇಮಕವಾದ. ಹಿಂದೆ ತನಗೆ ಕೊಡಲು ಒಪ್ಪಿದ ಹುದ್ದೆಗೆ, ಇದು ಸ್ವಲ್ಪ ಕೆಳ ದರ್ಜೆಯದಾದರೂ, ಲಂಡನ್ನಿನಲ್ಲಿ ತನ್ನ ತತ್ವಗಳ ಆಚರಣೆಗೆ ಅವಕಾಶ ದೊರೆಯುತ್ತದೆಂಬ ಭರವಸೆಯಿಂದ ಒಪ್ಪಿಕೊಂಡ.

ಲಿಸ್ಟರ್ ದಂಪತಿಗಳು ಅಕ್ಟೋಬರ್ 1877ರಲ್ಲಿ ಲಂಡನ್ನಿಗೆ ಬಂದು ನೆಲೆಸಿದರು. ಸಾಮಾನ್ಯವಾಗಿ ಇತರ ಎಲ್ಲ ಸಲಹಾ ವೈದ್ಯರು ವಾಸಿಸುತ್ತಿದ್ದ ಕನ್ಸಲ್‌ಟೆಂಟ್‌ರ ಬಡಾವಣೆಯನ್ನು ಬಿಟ್ಟು ಪಾರ್ಕ್ ಕ್ರೆಸೆಂಟ್ ಎಂಬ ವಲಯದಲ್ಲಿ ಮನೆ ಮಾಡಿದ. ಲಂಡನ್ನಿನಲ್ಲಿ ಇತರ ವೈದ್ಯರೊಡನೆ ಪೈಪೋಟಿಗಿಳಿದು ಹಣ ಗಳಿಸುವುದು ಅವನ ಉದ್ದೇಶವಾಗಿರಲಿಲ್ಲ. ಲಂಡನ್ನಿನಲ್ಲಿರುವ ಸಮಯದಲ್ಲಿ ಹೆಚ್ಚು ಖಾಸಗಿ ಪ್ರಾಕ್ಟೀಸನ್ನು ಸಹಾ ಬೆಳೆಸಿಕೊಳ್ಳಲಿಲ್ಲ. ಆದರೂ ಅವನನ್ನೇ ನೋಡಬೇಕೆನ್ನುವವರು ದೇಶ ವಿದೇಶಗಳಿಂದ ಬರುತ್ತಿದ್ದರು. ಅಲ್ಲೇ ಹತ್ತಿರದ ಫಿಟ್ಸ್‌ರಾಯನ್ ಚೌಕದಲ್ಲಿದ್ದ ನರ್ಸಿಂಗ್ ಹೋಂ ಒಂದಕ್ಕೆ ತನ್ನ ಖಾಸಗಿ ರೋಗಿಗಳನ್ನು ಸೇರಿಸಿ ಚಿಕಿತ್ಸೆಮಾಡುತ್ತಿದ್ದನು.

ಆಂಟಿ ಸೆಪ್ಟಿಕ್ ನಿಯಮಗಳ ಯಶಸ್ಸಿಗೆ ಅವುಗಳನ್ನುಕಟ್ಟುನಿಟ್ಟಾಗಿ ಆಚರಿಸುವ ಮಹತ್ವದ ಅರಿವಿದ್ದ ಲಿಸ್ಟರ್, ಲಂಡನ್ನಿಗೆ ಹೋಗುವಾಗ ನಾಲ್ಕು ಜನ ನೆಚ್ಚಿನ ಸಹಾಯಕರನ್ನು ಕರೆದುಕೊಂಡು ಹೋಗಿದ್ದ. ಅವರಲ್ಲಿ ವ್ಯಾಟ್ಸನ್ ಚೈನ್ ಮತ್ತು ಜೇಮ್ಸ್ ಸ್ಟೂವರ್ಟ್ ಆಗಲೇ ವೈದ್ಯ ತರಬೇತಿ ಪಡೆದವರಾಗಿದ್ದರು. ವಿಲಿಯಂ ದೋಬಿ ಮತ್ತು ಜೇಮ್ಸ್ ಆಲ್ರಮ್ ಅವನ ವಿಭಾಗದಲ್ಲಿ ಕಲಿಯುತ್ತಿದ್ದವರು.

ಲಂಡನ್ನಿನ ಆಸ್ಪತ್ರೆಯ ಲಿಸ್ಟರ್‌ನ ವಾರ್ಡುಗಳು, ಆಪರೇಷನ್ ಥಿಯೇಟರ್ ಮುಂತಾದ ಕಡೆ ಆಂಟಿಸೆಪ್ಟಿಕ್ ನಿಯಮಗಳು ಕಟ್ಟುನಿಟ್ಟಾಗಿ ಆಚರಣೆಯಾಗವಂತೆ ನೋಡಿಕೊಳ್ಳುತ್ತಿದ್ದರು. ಅವರೆಲ್ಲಾ ಲಿಸ್ಟರ್‌ನಂತೆ ಕಷ್ಟಸಹಿಷ್ಣುಗಳಾಗಿ, ಶ್ರದ್ಧೆಯಿಂದ ಕೆಲಸಮಾಡಿ ಮುಂದೆ ಇಂಗ್ಲೆಂಡಿನ ಖ್ಯಾತ ಶಸ್ತ್ರವೈದ್ಯರಾಗಿ ಹೆಸರುಗಳಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ.

ಲಿಸ್ಟರ್, ಲಂಡನ್ನಿಗೆ ಬರುವಾಗ ಅಲ್ಲಿ ತನಗಾಗಲೀ ಅಥವಾ ಅವನ ಕಾರ್ಯ ವಿಧಾನಗಳಿಗಾಗಲೀ ಅದ್ಭುತ ಸ್ವಾಗತ ದೊರೆಯುತ್ತದೆಂದು ನಂಬಿರಲಿಲ್ಲ. ಅಲ್ಲಿಯ ಶಸ್ತ್ರವೈದ್ಯರ ಸಮೂಹದಲ್ಲೂ ಅವನ ಬಗೆಗೆ ತಾತ್ಸಾರವಿದ್ದುದು ಗುಟ್ಟಾಗೇನೂ ಇರಲಿಲ್ಲ. ಆದರೂ ಅವನು ಲಂಡನ್ನಿಗೆ ಬಂದು ಆಂಟಿಸೆಪ್ಟಿಕ್ ನಿಯಮಗಳನ್ನು ಪ್ರದರ್ಶಿಸುವುದನ್ನಾದರೂ ತೆರೆದ ಮನಸ್ಸಿನಿಂದ ಗಮನಿಸಬಹುದಿತ್ತು. ಆದರೆ ಆಗಲೂ ಅವರಲ್ಲಿ ಉದಾಸೀನ ಭಾವನೆಗಳೇ ಇದ್ದವು. ಅಷ್ಟೇಕೆ ಅಲ್ಲಿಯ ವೈದ್ಯಕೀಯ ವಿದ್ಯಾರ್ಥಿಗಳಲ್ಲೂ ಲಿಸ್ಟರ್ ಬಗೆಗೆ ಅಂತಹದೇ ಧೋರಣೆ ಇದ್ದಂತಿತ್ತು. ಎಡಿನ್‌ಬರೋದಲ್ಲಿ ವಿದ್ಯಾರ್ಥಿಗಳಿಗೆ ಆರಾಧ್ಯ ದೇವರಂತಿದ್ದು, ವೃತ್ತಿ ಬಾಂಧವರ ಸ್ನೇಹ ಗೌರವಗಳಿಗೆ ಪಾತ್ರನಾಗಿದ್ದ ಲಿಸ್ಟರ್ ಇಲ್ಲಿ ಹಗೆತನ, ಜುಗುಪ್ಸೆಯ ವಾತಾವರಣವನ್ನ ಎದುರಿಸಬೇಕಾಯಿತು. ಲಿಸ್ಟರ್ ವಿದ್ಯಾರ್ಥಿಗಳಿಗೆ ನೀಡಿದ ಆರಂಭದ ಭಾಷಣದ ಸಮಯದಲ್ಲಾದ ಅಹಿತಕರ ಘಟನೆಯನ್ನು ಪುಸ್ತಕದ ಶುರುವಿನ ಪ್ರಸ್ತಾಪಿಸಲಾಗಿದೆ. ಆಸ್ಪತ್ರೆಯ ವಾರ್ಡುಗಳಲ್ಲೂ ದಾದಿಯರು ಬಹಿರಂಗವಾಗಿಯೇ ಅಸಹಕಾರ ವ್ಯಕ್ತಪಡಿಸುತ್ತಿದ್ದರು. ವಾರ್ಡುಗಳಲ್ಲಿ ಆಂಟಿಸೆಪ್ಟಿಕ್ ನಿಯಮಗಳ ಆಚರಣೆಗೆ ಅವರಿಂದ ಸಹಕಾರ ದೊರೆಯುತ್ತಿರಲಿಲ್ಲ. ಹಿಂದಿನಿಂದಲೂ ಅಭ್ಯಾಸ ಮಾಡಿಕೊಂಡಿದ್ದ ಪದ್ಧತಿಗಳನ್ನು ತ್ಯಜಿಸಲು ಅವರು ತಯಾರಿರಲಿಲ್ಲ. ಮೇಲಾಗಿ ಲಿಸ್ಟರ್ ಮತ್ತು ಅವನ ಸಹಾಯಕರು ಗಾಯಗಳ ಪಟ್ಟಿಗಳನ್ನು ಬದಲಾಯಿಸುವ ಕಾರ್ಯವನ್ನು ಅವರೇ ಖುದ್ದಾಗಿ ಮಾಡುತ್ತಿದ್ದುದು, ದಾದಿಯರ ಕ್ಷೇತ್ರಕ್ಕೆ ಅತಿಕ್ರಮಿಸಿದಂತಾಗಿತ್ತು. ಎಡಿನ್‌ಬರೋದಿಂದ ಲಿಸ್ಟರ್‌ನ ಹಳೆಯ ರೋಗಿಯೊಬ್ಬಳು ಮುಂದುವರಿದ ಚಿಕಿತ್ಸೆಗಾಗಿ ಲಂಡನ್ನಿಗೆ ಬಂದಾಗ ದಾದಿಯರು ಆಕೆಯನ್ನು ಸೇರಿಸಿಕೊಳ್ಳಲು ನಿರ್ದಾಕ್ಷಿಣ್ಯವಾಗಿ ನಿರಾಕರಿಸಿದರು. ಗಡಗಡ ನಡುಗುವ ಚಳಿಯಲ್ಲಿ ಹೊರದೂಡಿದರು. ಸಹಾಯಕ ಸ್ಟೂವರ್ಟ್ ಮತ್ತೆ

ಕೆಲವರು ಒತ್ತಾಯದಿಂದ ವಾರ್ಡಿಗೆ ಹೊತ್ತುಕೊಂಡು ಹೋಗಿ ಮಲಗಿಸಬೇಕಾಯಿತು. ಲಿಸ್ಟರ್ ಲಂಡನ್ನಿನಲ್ಲಿ ಎದುರಿಸಿದ್ದ ಪ್ರತಿಕೂಲ ವಾತಾವರಣದ ಒಂದು ಉದಾಹರಣೆ ಇದೆನ್ನಬಹುದು. ಲಿಸ್ಟರ್ ಮುಂದೆ ಆಂಟಿಸೆಪ್ಟಿಕ್ ನಿಯಮಗಳನ್ನು ವ್ಯಾಪಕವಾಗಿ ರೂಢಿಗೆ ತಂದಾಗ ಉಂಟಾಗುತ್ತಿದ್ದ ಒಳ್ಳೆಯ ಪರಿಣಾಮಗಳು ಅವರೆಲ್ಲರ ಕಣ್ಣು ತೆರೆಸುವಂತಾಯಿತು. ಆ ತತ್ವಗಳಿಗೆ ಮಾರುಹೋಗಿ ಅವರೆಲ್ಲಾ ಲಿಸ್ಟರ್‌ನ ಆರಾಧಕರಾದರು.

ಲಿಸ್ಟರ್, ಲಂಡನ್ನಿಗೆ ಬಂದಾಗಿನಿಂದ ಅವನಿಗೆ ಪ್ರತಿಕೂಲ ವಾತಾವರಣವಿದ್ದರೂ, ವೈದ್ಯರು ಮತ್ತು ವಿದ್ಯಾರ್ಥಿಗಳನ್ನು ತನ್ನ ಕಡೆ ಆಕರ್ಷಿಸಲು ಹಲವು ಪ್ರಯತ್ನಗಳನ್ನು ಮಾಡುತ್ತಲೇ ಇದ್ದನು. ದ್ರಾಕ್ಷಾರಸದಲ್ಲಿ ಹುದುಗೇಳುವುದಕ್ಕೆ ವಾತಾವರಣದಲ್ಲಿನ ಸೂಕ್ಷ್ಮ ಜೀವಾಣುಗಳು ಕಾರಣವಾದಂತೆ, ಗಾಯಗಳಲ್ಲಿ ಕೀವಾಗುವುದಕ್ಕೂ ಅವೇ ಕಾರಣವೆಂಬುದು ಅವನಿಗೆ ಮನವರಿಕೆಯಾಗಿತ್ತಾದರೂ, ಇತರರಿಗೆ ಮನದಟ್ಟು ಮಾಡುವುದು ತುಂಬಾ ಕಷ್ಟದ ಕೆಲಸವಾಗಿತ್ತು. ಅದಕ್ಕಾಗಿ ಒಬ್ಬರಿಂದ ಶುದ್ಧ ಪರಿಸರದಲ್ಲಿ ಸ್ವಲ್ಪ ರಕ್ತವನ್ನು ಹೊರತೆಗೆದು ಶುದ್ಧಪಡಿಸಿದ ಗಾಜಿನ ಫ್ಲಾಸ್ಕಿನಲ್ಲಿರಿಸಿ, ಅದರ ಬಾಯಿ ಮುಚ್ಚಿ ಸ್ವಲ್ಪ ಕಾಲ ಇಟ್ಟನು. ಒಂದೆರಡು ದಿನ ಅದರಲ್ಲಿ ಯಾವ ವ್ಯತ್ಯಾಸಗಳೂ ಕಾಣಲಿಲ್ಲ. ಮುಂದೆ ಅದೇ ರಕ್ತಕ್ಕೆ ಕೀವಿನ ಅಂಶವಿರುವ ಸ್ವಲ್ಪ ರಕ್ತವನ್ನು ಸೇರಿಸಿದನು. ಕೆಲವೇ ತಾಸುಗಳಲ್ಲಿ ಅದು ಕೊಳೆತು ನಾರುವಂತಾಯಿತು. ಆದುದರಿಂದ ರಕ್ತ ತನ್ನಷ್ಟಕ್ಕೆ ತಾನೇ ಕೊಳೆತು ನಾರುವುದಿಲ್ಲ; ಆದರೆ ಮೊದಲೇ ಕೊಳೆತ ರಕ್ತ (ಕೀವಾದ ರಕ್ತ) ಅಥವಾ ಅಂತಹದೇ ಇತರ ವಸ್ತುವನ್ನು ಸೇರಿಸಿದರೆಅದು ಕೊಳೆಯುತ್ತದೆ. ಕೊಳೆತ ವಸ್ತುಗಳಲ್ಲಿರಬಹುದಾದ ಮಿಣಜೀವಿಗಳು ಅದರಲ್ಲಿ ವೃದ್ಧಿಯಾಗಿ, ಒಳ್ಳೆಯ ಸ್ಥಿತಿಯಲ್ಲಿರುವ ರಕ್ತವೂ ಕೊಳೆಯುವಂತೆ ಮಾಡುತ್ತದೆಂಬುದನ್ನು ಪರೋಕ್ಷವಾಗಿ ತೋರಿಸಿಕೊಟ್ಟನು. ಅದೇ ರೀತಿ ಶುದ್ದವಾದ ಹಾಲಿನಲ್ಲಿ ಹುದುಗೇಳುವುದನ್ನೂ ಪ್ರದರ್ಶಿಸಿದ. ಹಸುವಿನ ಕೆಚ್ಚಲನ್ನು ಆಂಟಿಸೆಪ್ಟಿಕ್ ನಿಯಮಗಳ ಪ್ರಕಾರ ಶುಚಿಗೊಳಿಸಿ ನಂತರ ಹಾಲು ಕರೆದರೆ, ಅಂತಹ ಹಾಲು ಬಹಳ ಸಮಯ ಕೆಡುವುದಿಲ್ಲ. ಕೆಚ್ಚಲು ಶುದ್ಧವಾಗಿರದೆ ಅದಕ್ಕೆ ಯಾವುದೇ ಕಾರಣದಿಂದ ಸೂಕ್ಷ್ಮ ಜೀವಾಣುಗಳು ಅಂಟಿಕೊಂಡಿದ್ದರೆ, ಹಾಲು ಸ್ವಲ್ಪ ಸಮಯದಲ್ಲೇ ಕೆಂಪು ಅಥವಾ ಹಳದಿ ಬಣ್ಣಕ್ಕೆ

ತಿರುಗುತ್ತದೆ. ಆದರೆ ಲ್ಯಾಕ್ಟೋ ಬ್ಯಾಸಿಲಸ್ (BACTERIUM LACTIS) ಎಂಬ ಸೂಕ್ಷ್ಮಾಣು ಇರುವ ಮಜ್ಜಿಗೆಯಂತಹ ದ್ರಾವಣವನ್ನು ಸೇರಿಸಿದರೆ ಅದು ಮಿಕ್ಕೆಲ್ಲಾ ಸೂಕ್ಷ್ಮಾಣುಗಳ ಬೆಳವಣಿಗೆಯನ್ನು ಕುಂಠಿಸಿ, ಹಾಲಿನಲ್ಲಿ ಹುದುಗೇಳುವ ಕ್ರಿಯೆ ಉಂಟುಮಾಡಿ, ಮೊಸರಾಗುವುದನ್ನು ತೋರಿಸಿಕೊಟ್ಟನು. ತನ್ನಲ್ಲಿದ್ದ ಸೂಕ್ಷ್ಮ ದರ್ಶಕ ಯಂತ್ರದ ಸಹಾಯದಿಂದ ಲ್ಯಾಕ್ಟೋ ಬ್ಯಾಸಿಲೈಗಳನ್ನು ಪ್ರದರ್ಶಿಸಿ ತೋರಿಸಿದ. ಹಾಲನ್ನು ಬಹಳಷ್ಟು ತೆಳುವಾಗಿಸಿ, ಒಂದು ತೊಟ್ಟಿನಲ್ಲಿ ಒಂದೇ ಒಂದು ಲ್ಯಾಕ್ಟೋ ಬ್ಯಾಸಿಲೈ ಇರುವಂತೆ ಪ್ರತ್ಯೇಕಿಸುವಲ್ಲಿ ಯಶಸ್ವಿಯಾಗಿದ್ದು ಲಿಸ್ಟರ್‌ನ ಹಿರಿಮೆಯೆಂದೇ ಹೇಳಬೇಕು. ಹೀಗೆ ಒಂದೇ ಬ್ಯಾಸಿಲೈ ಇರುವ ತಾಜಾ ಬೆಳೆಯನ್ನುಂಟು ಮಾಡುವ ವಿಧಾನ ಬಹಳ ಕಾಲ ಜಾರಿಯಲ್ಲಿತ್ತು.

ಈ ರೀತಿಯ ಪ್ರಯೋಗಗಳನ್ನು ತರಗತಿಗಳಲ್ಲಿ ಮಾಡಿ ವಿದ್ಯಾರ್ಥಿಗಳಿಗೆ ಪ್ರದರ್ಶಿಸುತ್ತಿದ್ದ. ಕೆಲವರು ಅವುಗಳನ್ನು ಕುತೂಹಲದಿಂದ ನೋಡುತ್ತಿದ್ದರೆ, ಮತ್ತೆ ಕೆಲವರು ಶಸ್ತ್ರಚಿಕಿತ್ಸೆ ವಿಧಾನಗಳಿಗೂ ಇದಕ್ಕೂ ಎತ್ತಣ ಸಂಬಂಧ ಎಂದು ಗೊಣಗುತ್ತಿದ್ದರು. ಎಲ್ಲೋ ಒಬ್ಬಿಬ್ಬರು ಹುದುಗೇಳುವ ಕ್ರಿಯೆಗಳು ಗಾಯಗಳಲ್ಲಿ ಕೀವಾಗುವುದಕ್ಕೂ ಸಂಬಂಧವಿರಬಹುದೆಂದು ಯೋಚಿಸುತ್ತಿದ್ದಿರಬಹುದು. ಸೂಕ್ಷ್ಮ ಜೀವಾಣುಗಳನ್ನು ಪ್ರತ್ಯಕ್ಷವಾಗಿ ತೋರಿಸಲಾಗದಿದ್ದ ಆ ಸಂದರ್ಭದಲ್ಲಿ ಲಿಸ್ಟರ್‌ನ ಪ್ರತಿಪಾದನೆಗಳನ್ನು ಅರ್ಥ ಮಾಡಿಕೊಳ್ಳುವುದು ಕಷ್ಟದ ಕೆಲಸವೇ ಸರಿ.

ಹಾಲಿನಲ್ಲಿ ಹುದುಗೇಳುವ ಕ್ರಿಯೆಯಿಂದ ಲಭಿಸುತ್ತಿದ್ದ ಬೆಣ್ಣೆ, ಗಿಣ್ಣುಗಳ ಮೇಲೆ ಬೆಳೆಯುತ್ತಿದ್ದ ಬೂಸಲು (FUNGI) ಗಳನ್ನು ಕೂಡಾ ವಿವರವಾಗಿ ಅಭ್ಯಸಿಸಿ ಅವುಗಳು ಕೂಡ ಜೀವಂತ ಕಣಗಳೆಂದು ವಾದಿಸಿದ್ದ. ಪೆನಿಸಿಲಿನ್ ಜೀವವಿರೋಧಕದ ಮೂಲವಾದ ಪೆನ್ಸಿಲಿಯಂ ಬೂಸಲನ್ನು ಆ ಕಾಲದಲ್ಲಿ ಲಿಸ್ಟರ್ ಗುರುತಿಸಿದ್ದನೆಂದರೆ ಅಚ್ಚರಿಯಾಗಬಹುದು. ಈ ಎಲ್ಲಾ ವಿಷಯಗಳ ಬಗೆಗೆ ತಿಳಿವಳಿಕೆ ಪಡೆದು ಕೊಳ್ಳಲು ಜರ್ಮನ್, ಫ್ರೆಂಚ್ ಭಾಷೆಗಳಲ್ಲಿದ್ದ ಗ್ರಂಥಗಳನ್ನು ಅಭ್ಯಸಿಸು ತ್ತಿದ್ದನೆಂದರೆ ಸೂಕ್ಷ್ಮ ಜೀವಾಣುಗಳ ಬಗೆಗೆ ಇದ್ದ ಆಸಕ್ತಿಯು ಅರ್ಥವಾಗಬಹುದು.

ಲಂಡನ್ನಿನಲ್ಲಿ ಲಿಸ್ಟರ್ ಕೆಲಸ ಆರಂಭಿಸಿದ ಮೊದಲ ಕೆಲವು ತಿಂಗಳುಗಳು ಅವನ ಜೀವಮಾನದಲ್ಲೇ ಅತ್ಯಂತ ನಿರುತ್ಸಾಹದಾಯಕ ಕಾಲವೆಂದು ಹೇಳಲಾಗಿದೆ. ವೈದ್ಯರು ಮತ್ತು ವಿದ್ಯಾರ್ಥಿಗಳನ್ನು ತನ್ನ ನಿಯಮಗಳತ್ತ ಆಕರ್ಷಿಸುವುದು ಕಷ್ಟವಾಗುತ್ತಿದ್ದುದರ ಜತೆಗೆ ಕೆಲವು ಖ್ಯಾತ ಹಿರಿಯ ವೈದ್ಯರೂ ಸಹಾ ಸಮಯ

ಸಿಕ್ಕಾಗಲೆಲ್ಲಾ ಲಿಸ್ಟರ್‌ನ ತತ್ವಗಳನ್ನು ಗೇಲಿ ಮಾಡುತ್ತಿದ್ದರಂತೆ. ಸರ್ ಕ್ಲೇರ್ ಥಾಮ್ಸನ್ ಅವರು ಶಸ್ತ್ರ ಚಿಕಿತ್ಸೆ ಜರುಗಿಸುತ್ತಿದ್ದ ಸಮಯದಲ್ಲಿಯಾರಾದರೂ ಒಳಗೆ ಬಂದರೆ ''ಬಾಗಿಲು ಮುಚ್ಚಿರಿ ಲಿಸ್ಟರನ ಸೂಕ್ಷ್ಮ ಜೀವಾಣುಗಳು ಒಳಗೆ ಬಂದಾವು'' ಎಂದು ಹಾಸ್ಯ ಚಟಾಕಿ ಹಾರಿಸಿ ಅಲ್ಲಿದ್ದವರನ್ನೆಲ್ಲಾ ನಕ್ಕು ನಗಿಸುತ್ತಿದ್ದರಂತೆ!

ಆದರೆ ಪರಿಸ್ಥಿತಿ ಹಾಗೆ ಬಹಳ ಕಾಲ ಮುಂದುವರಿಯಲಿಲ್ಲ. ಇನ್ನೊಬ್ಬ ಖ್ಯಾತ ಶಸ್ತ್ರವೈದ್ಯರು ಕಷ್ಟಕರ ಗಳಗಂಡ (THYROID GOIRRE) ದ ಶಸ್ತ್ರ ಚಿಕಿತ್ಸೆಗೆ, ಲಿಸ್ಟರ್‌ನ ಸಹಾಯವನ್ನು ಕೋರಿದ್ದರು. ಆ ಚಿಕಿತ್ಸೆಗೆ, ಲಿಸ್ಟರ್ ಆಂಟಿಸೆಪ್ಟಿಕ್ ನಿಯಮಗಳನ್ನು ಕಟ್ಟುನಿಟ್ಟಾಗಿ ಆಚರಿಸುವ ಏರ್ಪಾಟು ಮಾಡಿಕೊಂಡ. ಕಾರ್ಬಾಲಿಕ್ ಆಮ್ಲದ ಸ್ಪ್ರೇಯನ್ನು ಆಪರೇಷನ್ ಕೊಠಡಿಯಲ್ಲೇ ಅಲ್ಲದೆ, ರೋಗಿಯನ್ನಿರಿಸಿದ್ದ ವಾರ್ಡ್‌ನಲ್ಲೂ ಒಂದು ದಿನವೆಲ್ಲಾ ಮುಂದುವರಿಸಿದರು. ಆಕೆಯ ಗಾಯದಲ್ಲಿ ಕೀವಿನ ಲವಲೇಶವೂ ಕಾಣಿಸಿಕೊಳ್ಳದೆ ವಾಸಿಯಾಯಿತು. ಅದೇ ಸಮಯದಲ್ಲಿ ಮುಂಗಾಲು ಚಿಪ್ಪು ಮುರಿದ ರೋಗಿಗೆ ಚಿಕಿತ್ಸೆ ಜರುಗಿಸುವಾಗ ಆಂಟಿಸೆಪ್ಟಿಕ್ ನಿಯಮಗಳನ್ನು ಅನುಸರಿಸಿದ್ದಲ್ಲದೆ, ಮುರಿದ ಚೂರುಗಳನ್ನು ಕೂಡಿಸಲು ಬೆಳ್ಳಿಯಿಂದ ತಯಾರಾದ ತಂತಿಗಳನ್ನು ಅವುಗಳ ಮೂಲಕ ತೂರಿಸಿ ಹೊಲಿಗೆ ಹಾಕಿದಂತೆ ಮಾಡಿದ್ದ. ಈ ಪ್ರಕರಣದಲ್ಲೂ ಕೀವಾಗದೇ ವಾಸಿಯಾಯಿತು. ಈ ತನಕ ಮುಂಗಾಲು ಕೀಲನ್ನು ತೆರೆದು ಚಿಕಿತ್ಸೆ ಮಾಡಿದ ಪ್ರಕರಣಗಳಲ್ಲೆಲ್ಲಾ ಕೀವಾಗಿ ಹೆಚ್ಚಿನ ಅನಾಹುತಗಳಾಗುತ್ತಿದ್ದವು. ಮುಂಗೈ ಮೂಳೆ ಮುರಿದ ರೋಗಿಯೊಬ್ಬನಿಗೂ ಬೆಳ್ಳಿಯ ತಂತಿಯನ್ನು ಪೋಣಿಸಿ ಯಾವುದೇ ತೊಡಕುಗಳಾಗದಂತೆ ವಾಸಿ ಮಾಡಿದ. ಅವರಲ್ಲಿ ಒಬ್ಬರಿಗೆ ಮೊದಲು ಹದಿನೈದು ಜನ ವೈದ್ಯರಿಂದ ಚಿಕಿತ್ಸೆಯಾಗಿದ್ದರೂ ಫಲಕಾರಿಯಾಗಿರಲಿಲ್ಲ. ಇಂತಹ ಚಿಕಿತ್ಸೆಗಳ ಪರಿಣಾಮಗಳ ವರದಿಗಳನ್ನು ತಯಾರಿಸಿ ವೈದ್ಯಕೀಯ ಪತ್ರಿಕೆಗಳಲ್ಲಿ ಲಿಸ್ಟರ್ ಬಿಡದೇ ಪ್ರಕಟಿಸುತ್ತಿದ್ದ. ವೈದ್ಯರ ಸಭೆಗಳನ್ನು, ಇಂತಹ ಪ್ರಕರಣಗಳನ್ನು ವರದಿ ಮಾಡಿ, ಚಿಕಿತ್ಸೆಗೊಳಗಾದ ರೋಗಿಗಳನ್ನು ಪ್ರತ್ಯಕ್ಷವಾಗಿ ಪ್ರದರ್ಶಿಸುತ್ತಲೂ ಇದ್ದನು. ಗಾಯಗಳಿಗೆ ಕಾರ್ಬಾಲಿಕ್ ಆಮ್ಲವನ್ನು ಲೇಪಿಸುವುದೇ ಆಂಟಿಸೆಪ್ಟಿಕ್ ನಿಯಮಗಳೆಂದು ತಿಳಿದುಕೊಂಡಿದ್ದ ಬಹುಪಾಲು ವೈದ್ಯರ ಕಣ್ಣು ತೆರೆಸುವಂತಾಯಿತು. ಅದು ಮುಖ್ಯವಾಗಿ ಕೈಗಳನ್ನು ತೊಳೆದು ಶುಚಿ

ಮಾಡಿಕೊಳ್ಳುವುದು, ಉಪಯೋಗಿಸುವ ಸಲಕರಣೆಗಳನ್ನು ಕಾರ್ಬಾಲಿಕ್ ಆಮ್ಲದಲ್ಲಿ ತೋಯಿಸಿಡುವುದು, ಮುಂತಾದ ಸರಳ ವಿಧಾನಗಳ ಮಹತ್ವವನ್ನು ಈಗ ಅವರೆಲ್ಲ ಅರಿಯುವಂತಾದರು. ಮೊದಮೊದಲು ಲಿಸ್ಟರ್‌ನ ಭಾಷಣಗಳು ಮುಗಿಯುಷ್ಟರಲ್ಲೇ ಅಸಂಬದ್ಧ ಪ್ರಶ್ನೆಗಳನ್ನು ಕೇಳಿ ಪೇಚಿಗೀಡುಮಾಡುತ್ತಿದ್ದವರು ಇತ್ತೀಚಿನ ದಿನಗಳಲ್ಲಿ ಆಂಟಿಸೆಪ್ಟಿಕ್ ನಿಯಮಗಳು ತಮಗೆ ಅರ್ಥವಾದಂತೆ ಚಪ್ಪಾಳೆ ತಟ್ಟಿ ಉತ್ತೇಜಿಸುತ್ತಿದ್ದರು.

ಸರ್ ಜಾನ್ ಎರಿಕ್‌ಸನ್ ಜೋಸೆಫ್, ಲಿಸ್ಟರ್‌ನ ಗುರುಸ್ಥಾನದಲ್ಲಿದ್ದವರು. ಸುಮಾರು 1874ರ ಸಮಯದಲ್ಲೂ ದೇಹದ ಹೊರ ಮೈಮೇಲೆ ಜರುಗಿಸುವ ಶಸ್ತ್ರಚಿಕಿತ್ಸೆಗಳು ಅಥವಾ ಕೊಳೆತು ಹೋದ ಕೈ ಕಾಲುಗಳ ಅಂಗಚ್ಛೇದನದಂಥ ಶಸ್ತ್ರಚಿಕಿತ್ಸೆಗಳನ್ನು ಕೈಗೊಳ್ಳಬಹುದೇ ಹೊರತು ಉದರಕೋಶ, ಎದೆಗೂಡು, ತಲೆ ಬುರುಡೆ, ಮುಂತಾದವನ್ನು ತೆರೆದು ಶಸ್ತ್ರಚಿಕಿತ್ಸೆ ಮಾಡುವ ಕಾಲ ಬರುವುದಿಲ್ಲವೆಂದು ಭವಿಷ್ಯ ಹೇಳುತ್ತಿದ್ದರು. ಆ ಸಮಯವೇ ಶಸ್ತ್ರಚಿಕಿತ್ಸಾ ಪದ್ಧತಿಯ ಸುವರ್ಣಯುಗ ಎಂಬ ನಿರ್ಧಾರಕ್ಕೂ ಬಂದು ಬಿಟ್ಟಿದ್ದರು. ಆದರೆ ಶಿಷ್ಯ ಲಿಸ್ಟರ್ ಭವಿಷ್ಯವಾಣಿಯನ್ನು ಅವರ ಕಣ್ಣೆದುರಿನಲ್ಲೇ ಹುಸಿಯಾಗಿಸುತ್ತಾನೆಂದು ಕನಸಿನಲ್ಲಿಯೂ ಊಹಿಸಿರಲಾರರು. ಸ್ವದೇಶದಲ್ಲಿವೈದ್ಯ ಸಮೂಹದವರಿಂದಲೇ ಇಷ್ಟೊಂದು ನಿರುತ್ಸಾಹಕರ ಪರಿಸ್ಥಿತಿಯನ್ನು ಎದುರಿಸುತ್ತಿದ್ದರೂ ಹೊರಗೆ, ಅದರಲ್ಲೂ ಯುರೋಪಿನ ಕೆಲವು ಕೇಂದ್ರಗಳಲ್ಲಿ ಲಿಸ್ಟರ್‌ನ ಆಂಟಿಸೆಪ್ಟಿಕ್ ನಿಯಮಗಳು ಜಯಭೇರಿ ಬಾರಿಸುತ್ತಿದ್ದವು. ಲಿಸ್ಟರ್ ಅನುಸರಿಸುತ್ತಿದ್ದ ಆಂಟಿಸೆಪ್ಟಿಕ್ ನಿಯಮಗಳ ರೀತಿ ನೀತಿಗಳನ್ನು ಖುದ್ದಾಗಿ ವೀಕ್ಷಿಸಲು ಅಂತಹ ಕೇಂದ್ರಗಳಿಂದ ವೈದ್ಯರ ತಂಡಗಳು ಲಂಡನ್ನಿಗೆ ಬಂದು ಹೋಗುತ್ತಿದ್ದವು. ಆಂಟಿಸೆಪ್ಟಿಕ್ ನಿಯಮಗಳು ವ್ಯವಸ್ಥಿತವಾಗಿ ಜಾರಿಗೆ ಬಂದದ್ದು ಯುರೋಪಿನಲ್ಲೇ. ಯುರೋಪಿನ ವೈದ್ಯ ಸಮೂಹದಲ್ಲೇ ಲಿಸ್ಟರ್ ಸ್ವದೇಶಕ್ಕಿಂತಲೂ ಹೆಚ್ಚು ಜನಪ್ರಿಯತೆ ಹೊಂದಿದ್ದನು. ಪ್ರಸಿದ್ಧ ಆ್ಯಮ್‌ಸ್ಟರ್ಡ್ಯಾಮ್ ನಗರದಲ್ಲಿ ಜರುಗಿದ ಆರನೆಯ ಅಂತರರಾಷ್ಟ್ರೀಯ ಮೆಡಿಕಲ್ ಕಾಂಗ್ರೆಸ್ (1879) ಗೆ ಲಿಸ್ಟರ್ ವಿಶೇಷ ಆಹ್ವಾನಿತನಾಗಿ ಹೋಗಿದ್ದಾಗ ಅಲ್ಲಿ ಅಭೂತಪೂರ್ವ ಸ್ವಾಗತ ಕಾದಿತ್ತು. ಅವನ ಭಾಷಣದ ಸರದಿ ಬಂದ ಕೂಡಲೇ ನೆರೆದಿದ್ದ ಅಪಾರ ವೈದ್ಯ ಸಮೂಹ ಒಮ್ಮೆಲೇ ಎದ್ದು ನಿಂತು ದೀರ್ಘ ಕಾಲ ಕರತಾಡನ ಮಾಡಿ ಹರ್ಷೋದ್ಗಾರ ಮಾಡಿದರು. ಭಾಷಣ ಮುಗಿದ ನಂತರ

ಅಧ್ಯಕ್ಷರಾಗಿದ್ದ ಪ್ರೊ। ಡಾಂಡರ್ಸ್ ಲಿಸ್ಟರ್‌ನನ್ನು ವೈಯಕ್ತಿಕವಾಗಿ ಅಭಿನಂದಿಸಿದರಲ್ಲದೇ ಅವನ ತತ್ವಗಳ ಆಚರಣೆಯಿಂದ ಇಡೀ ವೈದ್ಯ ಲೋಕ ಮತ್ತು ಜನ ಸಮುದಾಯಕ್ಕಾಗುತ್ತಿರುವ ಉಪಕಾರಕ್ಕೆ ಕೃತಜ್ಞತೆ ವ್ಯಕ್ತ ಪಡಿಸಿದರು.

## ೧೨.೧ ಪ್ಯಾಶ್ಚರ್ ಮತ್ತು ರಾಬರ್ಟ್ ಕಾಖ್‌ರ ಲಂಡನ್ ಸಮಾಗಮ

ಏಳನೆಯ ಅಂತರ ರಾಷ್ಟ್ರೀಯ ಮೆಡಿಕಲ್ ಕಾಂಗ್ರೆಸ್ ಲಂಡನ್ನಿನಲ್ಲಿ ಜರುಗಿತು (1883). ಫ್ರಾನ್ಸಿನ ಹೆಸರಾಂತ ವಿಜ್ಞಾನಿ ಲೂಯಿ ಪ್ಯಾಶ್ಚರ್ ಮತ್ತು ಜರ್ಮನಿಯ ರೋಗಾಣು ಶಾಸ್ತ್ರಜ್ಞ ರಾಬರ್ಟ್ ಕಾಖ್‌ರನ್ನು ಅಲ್ಲಿ ಸೇರಿಸುವಲ್ಲಿ ಲಿಸ್ಟರ್ ಯಶಸ್ವಿಯಾಗಿದ್ದ



ಚಿತ್ರ : ರಾಬರ್ಟ್ ಕಾಖ್ ಲೂಯಿ ಪ್ಯಾಶ್ಚರ್

ಪ್ಯಾಶ್ಚರ್ ಅದೇ ತಾನೆ ಶಕ್ತಿಗುಂದಿಸಿದ ಕೋಳಿ ಕಾಲರಾದ ರೋಗಾಣುಗಳನ್ನು (CHICKEN CHOLERA) ಕೋಳಿಗಳಿಗೆ ನೀಡಿ, ಅವುಗಳಿಗೆ ಅದೇ ರೋಗದ ಸೋಂಕು ಅಂಟಿದರೆ, ಕಾಯಿಲೆ ಪ್ರಕಟವಾಗುವುದಿಲ್ಲ ಎಂಬ

ಇಮ್ಯುನಿಟಿ ತತ್ವ (IMMUNITY) ವನ್ನು ಯಶಸ್ವಿಯಾಗಿ ತೋರಿಸಿಕೊಟ್ಟಿದ್ದರು. ಆ ಸಮಯದ ತನ್ನ ಭಾಷಣದಲ್ಲಿ ಆ ಬಗೆಗೆ ಹೆಚ್ಚು ವಿವರಗಳನ್ನು ನೀಡಿದರು. ವೈದ್ಯಕೀಯ ವಿಷಯಗಳ ಹಿನ್ನೆಲೆ ಇಲ್ಲದಿದ್ದರೂ, ಪ್ಯಾಶ್ಚರ್ ಜರುಗಿಸಿದ ಸಂಶೋಧನೆ ಒಂದು ಮೈಲುಗಲ್ಲಾದುದು ಗಮನಾರ್ಹ. ಮಾನವನೂ ಸೇರಿದಂತೆ ಇಡೀ ಜೀವ ಸಂಕುಲವನ್ನು ಅಂಟು ಜಾಡ್ಯಗಳ ವಿರುದ್ಧ ರಕ್ಷಣೆ ನೀಡಲು ರೋಗ ನಿರೋಧಕ ಲಸಿಕೆ (VACCINATION / IMMUNIZATION) ನೀಡುವ ಪದ್ಧತಿಗೆ ಅದೇ ನಾಂದಿಯಾಯಿತು

ಪ್ಯಾಶ್ಚರ್‌ಗಿಂತಲೂ ವಯಸ್ಸಿನಲ್ಲಿ ಕಿರಿಯವನಾಗಿದ್ದ ರಾಬರ್ಟ್ ಕಾಖ್ ಮಿಣಜೀವಿಗಳನ್ನು ಸೂಕ್ಷ್ಮದರ್ಶಕ ಯಂತ್ರದಲ್ಲಿ ಗುರುತಿಸುವಲ್ಲಿ ಯಶಸ್ವಿಯಾಗಿದ್ದ; ಅವುಗಳನ್ನು ಆಹಾರಾಂಶಗಳಿರುವ ಮಾಧ್ಯಮಗಳಲ್ಲಿ (NUTRITIVE MEDIA) ಬೆಳಿಸಿ (CULTURE) ವೃದ್ಧಿ ಮಾಡುವ ವಿಧಾನಗಳನ್ನ ಕಂಡು ಹಿಡಿದಿದ್ದ. ಆ ನಂತರ ಜೀವಾಣುಗಳನ್ನು ಗಾಜಿನ ಪಟ್ಟಗಳಿಗೆ (SLIDES) ಅಂಟಿಸಿ ಬಣ್ಣ ಹಚ್ಚಿಸಿ, ಎಲ್ಲರಿಗೂ ತೋರಿಸುವ ವಿಧಾನವನ್ನೂ ಅವರೇ ಮೊದಲ ಬಾರಿಗೆ ತೋರಿಸಿಕೊಟ್ಟವರು. ಜರ್ಮನಿಯ ಹಳ್ಳಿಯೊಂದರಲ್ಲಿ ವೈದ್ಯನಾಗಿದ್ದ ರಾಬರ್ಟ್ ಕಾಖ್ ಆಗ ಜನಪ್ರಿಯತೆಯ ಪರಾಕಾಷ್ಠತೆಯನ್ನು ಮುಟ್ಟು ವುದರಲ್ಲಿದ್ದ. ಫ್ರಾನ್ಸ್ ಮತ್ತು ಜರ್ಮನಿ ಆಗ ತಾನೆ ಭೀಕರ ಯುದ್ಧದಲ್ಲಿ ತೊಡಗಿದ್ದು ಪರಸರ ವೈರಿಗಳೆಂದು ಪರಿಗಣಿಸಿದರೂ ಸಮ್ಮೇಳನದಲ್ಲಿ ಪ್ಯಾಶ್ಚರ್, ಕಾಖ್‌ನನ್ನು ಆಲಂಗಿಸಿ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

ಲಿಸ್ಟರ್‌ನ ಕಾರ್ಯಕ್ಷೇತ್ರವಾದ ಲಂಡನ್ನಿನಲ್ಲಿ ಜರುಗಿದ ಈ ಸಮ್ಮೇಳನದಲ್ಲಿ ಲಿಸ್ಟರ್‌ನ ಭಾಷಣ ಪ್ರಾಮುಖ್ಯತೆ ಪಡೆಯುವುದು ಸ್ವಾಭಾವಿಕವಾಗಿತ್ತು. ಅವನ ಸಾಧನೆಗಳು ವಿದೇಶಗಳಲ್ಲಿ ಹೆಚ್ಚಿನ ವೈದ್ಯರ ಗಮನ ಸೆಳೆದಿದ್ದರೂ, ಬ್ರಿಟನ್ನಿನ ವೈದ್ಯ ಸಮೂಹ ಅವನ ಕಾಲೆಳೆಯುವ ಕಾರ್ಯವನ್ನು ಬಿಡಲೇ ಇಲ್ಲ. ಲಂಡನ್‌ನಲ್ಲಿ ಇದ್ದ ಹಳೇ ಕಾಲದಲ್ಲಿ ಖ್ಯಾತ ವೈದ್ಯನೆನಿಸಿದ್ದ ಸರ್ ವಿಲಿಯಂ ಸವೋರಿ ಮತ್ತು ಅವರ ಚೇಲಾಗಳು ಅಪಸ್ವರ ಎತ್ತಿದರು. ರೋಗಿಗಳಿಗೆ ಒಳ್ಳೆಯ ಪೌಷ್ಟಿಕ ಆಹಾರವನ್ನು ನೀಡಿ ಆರೋಗ್ಯದ ನಿಯಮಗಳನ್ನು ಅನುಸರಿಸಿದರೆ, ಗಾಯಗಳಲ್ಲಿ ಕೀವಾಗುವುದಿಲ್ಲವೆಂದು ವಾದಿಸಿದರು. ಮತ್ತೆ ಕೆಲವರು ಶಸ್ತ್ರಚಿಕಿತ್ಸೆಯ ಸಮಯದಲ್ಲಿ ಪರಿಶುದ್ಧವಾದ ಬಟ್ಟೆ, ಬರೆ ಹಾಗೂ ಸಲಕರಣೆಗಳನ್ನು (ಲಿಸ್ಟರ್ ಪ್ರತಿಪಾದಿಸುತ್ತಿದ್ದ) ಬಳಸಿದರೆ ಗಾಯಗಳಲ್ಲಿ ನಂಜಾಗುವುದಿಲ್ಲವೆಂದು ತಮ್ಮ

ಅನುಭವವವನ್ನು ಹೇಳಿಕೊಂಡರು. ಲಂಡನ್ನಿನ ಇನ್ನೊಬ್ಬ ಹೆಸರಾಂತ ಶಸ್ತ್ರವೈದ್ಯರಾದ ಸರ್ ಸ್ಪೆನ್ಸರ್ ವೆಲ್ಸ್ ಇಂತಹ ನಿಯಮಗಳನ್ನು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದರು. ಮಹಿಳೆಯೊಬ್ಬಳ ಉದರ ಕೋಶವನ್ನುತೆರೆದು ಅಂಡಾಶಯದ ಗಡ್ಡೆ (OVARIAN TUMOUR) ಯನ್ನು ತೆಗೆದು ಯಶಸ್ಸು ಗಳಿಸಿದ್ದರು. ಆಕೆಯ ಗಾಯದಲ್ಲಿನಂಜಾಗದೆ ಚೇತರಿಸಿಕೊಂಡಿದ್ದಳು. ಬರ್ಮಿಂಗ್ ಹ್ಯಾಮ್‌ನ ಲಾಸನ್ ಟೈಟ್ ಎಂಬುವವರೂ ಸಹಾ ಇಂತಹ ಹಲವು ಚಿಕಿತ್ಸೆಗಳನ್ನು ಯಶಸ್ವಿಯಾಗಿ ನೆರವೇರಿಸಿದ್ದರು. ಅವರೆಲ್ಲಾ ತಮ್ಮ ಅನುಭವಗಳನ್ನು ವಿವರಿಸಿ, ಒಂದು ರೀತಿಯಲ್ಲಿ ಲಿಸ್ಟರ್‌ನ ತತ್ವಗಳಿಗೆ ಒತ್ತುಕೊಟ್ಟರೆಂದೇ ಹೇಳಬಹುದು. ಅಗೋಚರ ರೋಗಾಣುಗಳ ನಾಶಕ್ಕೆ ಲಿಸ್ಟರ್ ಕಾರ್ಬಾಲಿಕ್ ಆಮ್ಲವನ್ನು ಬಳಸುತ್ತಿದ್ದರೆ, ಇವರೆಲ್ಲಾ, ಬಹುಶಃ ತಮಗರಿವಿಲ್ಲದೇ ಕೆಲವು ಆಂಟಿಸೆಪ್ಟಿಕ್ ನಿಯಮಗಳನ್ನು ಅನುಸರಿಸುತ್ತಿದ್ದರೆಂದೇ ಹೇಳಬಹುದು. ಸಮ್ಮೇಳನದಲ್ಲಿ ಲಿಸ್ಟರ್‌ನ ತತ್ವಗಳ ಬಗೆಗೆ ಹೆಚ್ಚು ಮಾಹಿತಿ ದೊರೆತು, ಮುಂದೆ ಲಿಸ್ಟರ್‌ನ ಎಲ್ಲಾ ವಿಧಾನಗಳನ್ನೂ ಆಚರಿಸಿ, ಇನ್ನೂ ಒಳ್ಳೆಯ ಫಲಿತಾಂಶಗಳನ್ನು ಪಡೆಯಲಾರಂಭಿಸಿದರು.

# ೧೩. ಏಸೆಪ್ಟಿಕ್ ನಿಯಮಗಳು

ಲಂಡನ್ ಕಾನ್‌ಫರೆನ್ಸ್‌ನ ಫಲಶ್ರುತಿ ಎಂಬಂತೆ ಆಂಟಿಸೆಪ್ಟಿಕ್ ತತ್ವಗಳಿಗೆ ಪೂರಕವಾಗುವ ಇನ್ನೊಂದು ತತ್ವ ಬೆಳಕಿಗೆ ಬರುವಂತಾಯಿತು. ಅದೆಂದರೆ ಏಸೆಪ್ಟಿಕ್ ''ಪೂತಿರಹಿತ'' (ASEPTIC) ವಾತಾವರಣವನ್ನು ಕಲ್ಪಿಸುವ ವಿಧಾನ. ಲಂಡನ್ ಕಾಂಗ್ರೆಸ್‌ನಲ್ಲಿ ಸ್ಪೆನ್ಸರ್ ವೆಲ್ಸ್ ಮತ್ತು ಲಾಸನ್ ಟೈಟ್‌ರಂತಹವರು ಅನುಸರಿಸುತ್ತಿರುವ ಶುಚಿತ್ವದ ನಿಯಮಗಳನ್ನು ಪಾಲಿಸುವುದರಿಂದಲೇ ಲಿಸ್ಟರ್‌ನ ತತ್ವಗಳನ್ನು ಆಚರಿಸುವುದಕ್ಕಿಂತಲೂ ಒಳ್ಳೆಯ ಪರಿಣಾಮಗಳನ್ನು ಪಡೆಯಬಹುದೆಂಬುದು ಕೆಲವರ ಅನಿಸಿಕೆಯಾಯಿತು. ಆದರೆ ವಾಸ್ತವವಾಗಿ ಅವರೆಲ್ಲರೂ ಕೈಗಳನ್ನು ತೊಳೆಯಲು ಲಿಸ್ಟರ್‌ನಂತೆಯೇ ಸಾಬೂನು ಮತ್ತು ನೀರನ್ನು ಯಥೇಚ್ಛವಾಗಿ ಬಳಸುತ್ತಿದ್ದರು. ಟೈಟ್ ತನ್ನ ಸಲಕರಣೆಗಳನ್ನು ಬಿಸಿ ನೀರಿನಲ್ಲಿ ಕುದಿಸುತ್ತಿದ್ದ ಕೂಡ. ಆದುದರಿಂದ ಈ ರೀತಿ ನೀತಿಗಳು ಲಿಸ್ಟರ್ ಪ್ರತಿಪಾದಿಸುತ್ತಿದ್ದ ನಿಯಮಗಳ ಇನ್ನೊಂದು ಮಗ್ಗುಲಾಗಿದ್ದವೆಂದೇ ಹೇಳಬಹುದು. ಗಾಯ ಮತ್ತು ಶಸ್ತ್ರ ಚಿಕಿತ್ಸಾ ಸಂದರ್ಭಗಳಲ್ಲಿ ಆಶುಚಿಯ ಕೈಗಳು, ಸಲಕರಣೆಗಳು ಮತ್ತು ಬಟ್ಟೆ ಬರೆಗಳ ಮೂಲಕ ಸೇರಬಹುದಾದ ಸೂಕ್ಷ್ಮ ಜೀವಾಣುಗಳ ನಾಶಕ್ಕೆ ಇನ್ನೂ ಒಂದು ಮಾರ್ಗ ಅದಾಗಿತ್ತು. ಲಿಸ್ಟರ್ ಕಾರ್ಬಾಲಿಕ್ ಆಮ್ಲದ ವಾತಾವರಣ ಉಂಟು ಮಾಡುವುದು, ಸಲಕರಣೆಗಳನ್ನು ಅದರಲ್ಲಿ ತೋಯಿಸಿಡುವುದು, ಮುಂತಾದ ಕ್ರಮಗಳಿಗೆ ಅವು ಪರ್ಯಾಯ ಕ್ರಮಗಳಾಗಿ ಆಚರಿಸುವಂತಾದವು. ಆದುದರಿಂದ ಮುಂದಿನ ವರ್ಷಗಳಲ್ಲಿ ಆಂಟಿಸೆಪ್ಟಿಕ್ - ಏಸೆಪ್ಟಿಕ್ ಪದಗಳ ಬಳಕೆ ಒಂದಕ್ಕೊಂದು ಪರ್ಯಾಯವಾಗಿ ಬಳಕೆಗೆ ಬಂದುದರಲ್ಲಿ ಆಶ್ಚರ್ಯವೇನಿಲ್ಲ. ಅವುಗಳ ಬಳಕೆಯಿಂದ ಉದರ ಕೋಶದಲ್ಲಿ ಜರುಗಿಸುತ್ತಿದ್ದ ಶಸ್ತ್ರ ಚಿಕಿತ್ಸೆಗಳೇ ಅಲ್ಲದೆ ಇತರ ಚಿಕಿತ್ಸೆಗಳಲ್ಲೂ ಈ ವಿಧಾನಗಳ ಬಳಕೆಯಿಂದ ಒಳ್ಳೆಯ ಫಲಿತಾಂಶಗಳು ಬರಲಾರಂಭಿಸಿದವು. ಫ್ರಾಂಕೊ-ಪ್ರಶ್ಯಿಯನ್ ಯುದ್ಧ (1870-71)ದ ಗಾಯಾಳುಗಳನ್ನು ಬರ್ಲಿನ್‌ನ ವಾನ್ ಬರ್ಗ್‌ಮನ್ ಈ ವಿಧಾನದಿಂದಲೇ ಚಿಕಿತ್ಸೆ ಮಾಡಿದ್ದ, ಏಸೆಪ್ಟಿಕ್ ಎಂಬ ಪದವನ್ನು ಬರ್ಗಮನ್‌ರೇ ಮೊಟ್ಟಮೊದಲು ಬಳಸಿದವರು. ತಾನು ಏಸೆಪ್ಟಿಕ್. ನಿಯಮಗಳನ್ನು ನಿರೂಪಿಸುವುದಕ್ಕೆ ಲಿಸ್ಟರ್ ಅಂಟಿಸೆಪ್ಟಿಕ್ ತತ್ವಗಳೇ ಮೂಲಾಧಾರವಾದವೆಂದು ಬರ್ಗಮನ್ ಹೇಳಿಕೊಂಡಿದ್ದರು ಕೂಡ. ಅವರು

ಇನ್ನೂ ಮುಂದುವರಿದು ಶಸ್ತ್ರ ಚಿಕಿತ್ಸೆಗೆ ಬಳಸುವ ಬಟ್ಟೆ ಬರೆಗಳೇ ಅಲ್ಲದೆ ಇತರ ಎಲ್ಲಾ ಸಲಕರಣೆಗಳನ್ನು ಸೂಕ್ಷ್ಮ ಜೀವಾಣು ರಹಿತವಾಗಿರುವಂತೆ ಮಾಡಬೇಕು; ಆಪರೇಷನ್ ಥಿಯೇಟರ್‌ನೊಳಗೆ ಇರುವ ಎಲ್ಲಾ ಸಾಮಾನು ಸರಂಜಾಮುಗಳೂ ಅಂತಹ ಪರಿಣಾಮಕ್ಕೊಳಗಾಗುವಂತೆ ಸಹಾ ಮಾಡಿದ್ದರು. ಅಲ್ಲಿ ಇರಿಸುತ್ತಿದ್ದ ಕುರ್ಚಿ, ಸ್ಟೂಲು, ಮೇಜು ಮುಂತಾದವುಗಳನ್ನು ಬಿಸಿಯಾದ ಹಬೆಯ ವಾತಾವರಣದಲ್ಲಿ ಸ್ವಲ್ಪ ಕಾಲ ಇಟ್ಟು ಜೀವಿ ಶುದ್ಧೀಕರಿಸುವ ಏರ್ಪಾಡು ಮಾಡುತ್ತಿದ್ದರಂತೆ.

ವಾನ್ ಬರ್ಗ್‌ಮನ್‌ನಂತೆಯೇ ಫ್ರಾಂಕೋ-ಪ್ರಶ್ಯಿಯನ್ ಯುದ್ಧ ರಂಗದಲ್ಲಿ ವೈದ್ಯಕೀಯ ನೆರವು ನೀಡಲು ಹೋಗಿದ್ದ ಕೀಲ್ ನಗರದ ಗುಸ್ತಾವ್ ನ್ಯೂಬರ್ ಶಸ್ತ್ರಚಿಕಿತ್ಸಾ ಕೊಠಡಿಗಳ ನಿರ್ಮಾಣದಲ್ಲೇ ಕೆಲವು ಸುಧಾರಣೆಗಳನ್ನು ತಂದರು. ಒಂದಾದ ಮೇಲೊಂದರಂತೆ ಐದು ಕೊಠಡಿಗಳ ಜಾಲವನ್ನು ನಿರ್ಮಿಸಿದರು. ಮೊದಲನೆಯದು ಹಾಗೂ ಹೊರಗಿನ ಸಂಪರ್ಕದಿಂದ ದೂರವಿರುವ ಆಪರೇಷನ್ ಕೊಠಡಿಯಲ್ಲಿ ಅತ್ಯಂತ ಶುಚಿಯ ಸ್ಥಿತಿಯಲ್ಲಿರುವ ರೋಗಿಗಳನ್ನು ಮಾತ್ರ ಶಸ್ತ್ರ ಚಿಕಿತ್ಸೆಗೊಳಪಡಿಸುವುದು, ನಂತರದ ಕೊಠಡಿಗಳಲ್ಲಿ ಅಷ್ಟೇನೂ ಶುಚಿಯಾಗಿರಲಾರದ ರೋಗಿಗಳಿಗೂ ಮತ್ತು ಕಟ್ಟಕಡೆಯದಲ್ಲಿ ಕೀವು ಸುರಿಯುತ್ತಿರುವ ರೋಗಿಗಳಿಗೆ ಶಸ್ತ್ರ ಚಿಕಿತ್ಸೆ ಜರುಗಿಸುವ ಏರ್ಪಾಡು ಮಾಡಿರುತ್ತಿದ್ದರು. ಆಪರೇಷನ್ ಕೊಠಡಿಗಳಿಗೆ ಮೊದಲು ಸ್ವಲ್ಪ ಕಾಲ ಬಿಸಿಯಾದ ಹಬೆಯನ್ನು ಹರಿಸಿ, ಅಲ್ಲಿಯ ವಾತಾವರಣವೂ ಶುಭ್ರವಾಗಿರುವಂತೆ ಮಾಡುತ್ತಿದ್ದರು. ರೋಗಿಯಲ್ಲಿ ಶಸ್ತ್ರ ಚಿಕಿತ್ಸೆ ಜರುಗಿಸಬೇಕಾದ ವಲಯವನ್ನು ಚಿಕಿತ್ಸೆ ಆರಂಭಿಸುವ ಮೊದಲು ಸಾಬೂನು ಮತ್ತು ನೀರಿನಿಂದ ಚೆನ್ನಾಗಿ ತೊಳೆಯುವ, ಆ ಜಾಗಕ್ಕೆ ಪಾದರಸದ ಕ್ಲೋರೈಡ್ ಇರುವ ಆಂಟಿಸೆಪ್ಟಿಕ್ ದ್ರಾವಣದ ಲೇಪನ ಮಾಡುವ ಪದ್ಧತಿಯನ್ನು ಅವರೇ ಜಾರಿಗೆ ತಂದವರು. ಶಸ್ತ್ರ ಚಿಕಿತ್ಸೆಯಲ್ಲಿ ಭಾಗವಹಿಸುವ ವೈದ್ಯರು ಮತ್ತಿತರ ಸಿಬ್ಬಂದಿಯವರೆಲ್ಲಾ ಕೈಗಳನ್ನು ಸಾಬೂನು ಮತ್ತು ನೀರಿನಿಂದ ತೊಳೆದುಕೊಳ್ಳುವುದು, ಅವುಗಳನ್ನು ಪಾದರಸದ ಕ್ಲೋರೈಡ್ ಇರುವ ದ್ರವದಲ್ಲಿ ಅದ್ದುವುದು ಅವರ ಬಾಯಿ ಮತ್ತು ಮೂಗಗಳಿಂದ ಸೋಂಕಿನ ದ್ರವಗಳು ಹೊರಬಂದು ಗಾಯಗಳಿಗೆ ಸೇರದಂತೆ ಮುಖವಾಡ ಮತ್ತು ಟೋಪಿಗಳನ್ನು ಧರಿಸುವುದು, ಕಾಲುಗಳಿಗೆ ಶುಚಿಗೊಳಿಸಿದ ರಬ್ಬರ್ ಬೂಟುಗಳನ್ನು ಧರಿಸುವುದು ಮುಂತಾದ ಮಾರ್ಪಾಡುಗಳೂ ಒಂದಾದ ಮೇಲೊಂದರಂತೆ

ಜಾರಿಗೆ ಬಂದವು. ಸಲಕರಣೆಗಳನ್ನು ಬಿಸಿ ನೀರಿನಲ್ಲಿಟ್ಟು ಕುದಿಸುವುದೇ ಅಲ್ಲದೆ ನಂತರ ಸ್ವಲ್ಪ ಕಾಲ ಕಾರ್ಬಾಲಿಕ್ ಆಮ್ಲದಲ್ಲಿ ತೋಯಿಸಿಡುತ್ತಿದ್ದರು. ಗಾಯಗಳಿಗೂ ದುರ್ಬಲ ಕಾರ್ಬಾಲಿಕ್ ಆಮ್ಲ ಲೇಪಿಸಿ ನಂತರ ಪಟ್ಟಿಗಳಿಂದ ಮುಚ್ಚಿಕಟ್ಟುವುದು. ನಡೆಯುತ್ತಿತ್ತು. ಆಪರೇಷನ್ ಕೊಠಡಿಯಲ್ಲಿ ಅನಾವಶ್ಯಕವಾಗಿ ಜನ ಸೇರುವುದನ್ನು ನಿಷೇಧಿಸಿ, ಅಲ್ಲಿ ಹೆಚ್ಚಿನ ಮಾತುಗಳನ್ನಾಡದಂತೆಯೂ ನೋಡಿಕೊಂಡರು. ಗುಸ್ತಾವ್ ನ್ಯೂಬರ್ ಜಾರಿಗೆ ತಂದ ಸುಧಾರಣೆಗಳಿಂದ ಗಾಯಗಳಲ್ಲಿ ನಂಜಾಗುವ ಪ್ರಮಾಣ ಬಹಳಷ್ಟು ಕಡಿಮೆಯಾಯಿತು. ಜೊತೆಗೆ ಶಾಖವನ್ನು ಬಳಸಿ ಜೀವಿ ಶುದ್ಧೀಕರಿಸುವ ಇನ್ನೊಂದು ತತ್ವ, ಆಂಟಿಸೆಪ್ಟಿಕ್-ಏಸೆಪ್ಟಿಕ್ ನಿಯಮಗಳಿಗೆ ಪೂರಕವಾಗಿ ಸೇರ್ಪಡೆಯಾಗುವಂತಾಯಿತು. ಇದರಿಂದ ವಾತಾವರಣದಲ್ಲಿ ಬರಹುದಾದ ಸೂಕ್ಷ್ಮ ಜೀವಾಣುಗಳ ವಿನಾಶಕ್ಕಾಗಿ, ಬಳಸುತ್ತಿದ್ದ ಕಾರ್ಬಾಲಿಕ್ ಆಮ್ಲದ ಸ್ಪ್ರೇಯನ್ನು ಹಲವರು ನಿಲ್ಲಿಸಿಬಿಟ್ಟರು. ಆ ತನಕ ಅದರಲ್ಲಿ ಹೆಚ್ಚು ನಂಬಿಕೆ ಇಟ್ಟು ಬಳಸುತ್ತಿದ್ದ ಲಿಸ್ಟರ್‌ನೇ ಅದನ್ನು ತ್ಯಜಿಸಲು ಮುಂದಾದ. ಆದರೂ ಶಸ್ತ್ರ ಚಿಕಿತ್ಸಾ ನಂತರ ಇನ್ನೂ ಒಳ್ಳೆಯ ಪರಿಣಾಮಗಳನ್ನು ಪಡೆಯುವ ಉದ್ದೇಶದಿಂದ ಹಲವು ಬದಲಾವಣೆಗಳು ಪ್ರಪಂಚದ ವಿವಿಧ ಕಡೆಗಳಲ್ಲಿ ಜಾರಿಗೆ ಬರುತ್ತಲೇ ಇದ್ದವು. ಆ ರೀತಿಯಲ್ಲಿ ಲಿಸ್ಟರ್ ನಿಯಮಗಳಿಗೆ ಪೂರಕವಾಗಿ ಜಾರಿಗೆ ಬಂದ ಕೈಗಳಿಗೆ ಗ್ಲವಸು (GLOVES) ಗಳನ್ನು ಧರಿಸುವ ವಿಧಾನದ ಪ್ರಕರಣ ಇಲ್ಲಿ ಉಲ್ಲೇಖಾರ್ಹ.

ವಿಲಿಯಂ ಹಾಲ್‌ಸ್ಟೆಡ್ ಅಮೆರಿಕಾ ಬಾಲ್ಟಿಮೋರ್ ಆಸ್ಪತ್ರೆಯ ಖ್ಯಾತಿವೆತ್ತ ಶಸ್ತ್ರವೈದ್ಯರು. ಅವರ ಆಪರೇಷನ್ ಕೊಠಡಿಯಲ್ಲಿ ಪ್ರಥಮ ಸಹಾಯಕ ದಾದಿಯ ಕೈಗಳು ದಿನವೆಲ್ಲಾ ಹಲವು ಬಾರಿ ಕಾರ್ಬಾಲಿಕ್ ಆಮ್ಲದಲ್ಲಿ ಅದ್ದಬೇಕಾಗುತ್ತಿದ್ದುದರಿಂದ ಕೈ ಚರ್ಮ ಆಗಾಗ್ಗೆ ಸುಟ್ಟಂತಾಗುತ್ತಿತ್ತು. ಅದರಿಂದ ಒಂದು ಬಗೆಯ ಚರ್ಮ ವ್ಯಾಧಿ ಸದಾ ಆಕೆಯನ್ನು ಬಾಧಿಸುತ್ತಿತ್ತು. ಅದರಿಂದ ಬೇಸತ್ತು ಆಕೆ ತನ್ನ ಕೆಲಸವನ್ನು ತ್ಯಜಿಸುವುದರಲ್ಲಿದ್ದಳು. ಹಾಲ್‌ಸ್ಟೆಡ್‌ರಿಗೆ ಅತ್ಯಂತ ತೃಪ್ತಿಕರವಾಗಿ ಸಹಾಯ ಮಾಡುತ್ತಿದ್ದು. ದಕ್ಷತೆಗೆ ಹೆಸರಾಗಿದ್ದ ಆಕೆಯನ್ನು ಕಳೆದುಕೊಳ್ಳಲು ಅವರು ತಯಾರಿರಲಿಲ್ಲ. ಕೈಗಳಿಗೆ ರಬ್ಬರ್ ಗವಸುಗಳನ್ನು ಧರಿಸಿದರೆ ಹೇಗಾಗಬಹುದೆಂದು ಯೋಚಿಸಿದ್ದರು. ಅಮೆರಿಕಾದ ಹೆಸರಾಂತ ಗುಡ್‌ಇಯರ್ ರಬ್ಬರ್ ಕಂಪನಿಗೆ ಅಂತಹ ರಬ್ಬರ್ ಗವಸುಗಳನ್ನು

ತಯಾರು ಮಾಡಿಕೊಡುವಂತೆ ಕೇಳಿಕೊಂಡರು. ಆಕೆ ಅವುಗಳನ್ನು ಧರಿಸಲು ಆರಂಭಿಸಿದ ಸ್ವಲ್ಪ ಕಾಲದಲ್ಲೇ ಒಳ್ಳೆಯ ಪರಿಣಾಮಗಳುಂಟಾದವು. ಮುಂದೆ 1886ರ ನಂತರ ಶಸ್ತ್ರ ಚಿಕಿತ್ಸೆಯಲ್ಲಿ ಭಾಗವಹಿಸುವ ವೈದ್ಯರು ಮತ್ತು ಇತರ ಸಿಬ್ಬಂದಿಗಳು ಅಂತಹ ಗವಸುಗಳನ್ನು ಧರಿಸುವುದು ಖಾಯಂ ಆಯಿತು. ಈಗ ರಬ್ಬರ್ ಬದಲಿಗೆ ಅದಕ್ಕಿಂತಲೂ ಉತ್ತಮ ತರಹದ ವಸ್ತುಗಳಿಂದ ತಯಾರಿಸಿದ ತೆಳ್ಳನೆಯ ಗವಸುಗಳು ಬಳಕೆಗೆ ಬಂದಿವೆ. ಅವುಗಳನ್ನು ಜೀವಿ ಶುದ್ಧೀಕರಿಸುವುದು ಸಾಧ್ಯವಾಗಿರುವುದರಿಂದ, ರೋಗಾಣುಗಳು ಗಾಯಗಳಿಗೆ ಕೈಗಳ ಮುಖಾಂತರ ಸೇರುವ ಅವಕಾಶಗಳೇ ಇಲ್ಲಂದತಾಗಿದೆ. ಪ್ರಸ್ತುತ ಕೈಗಳನ್ನು ಚೆನ್ನಾಗಿ ತೊಳೆದು ಶುದ್ಧಿ ಮಾಡಿಕೊಂಡು ಜೀವಿ ಶುದ್ಧೀಕರಿಸಿದ ವಸ್ತುಗಳನ್ನು ಧರಿಸದೇ ಯಾವ ಶಸ್ತ್ರ ಚಿಕಿತ್ಸೆಗಳನ್ನೂ ಜರುಗಿಸುವುದಿಲ್ಲ.

ರಕ್ತನಾಳಗಳಿಂದ ರಕ್ತ ಸುರಿಯುವುದನ್ನು ತಡೆಗಟ್ಟಲು, ಅವುಗಳನ್ನು ದಾರಗಳಿಂದ ಬಿಗಿದು ಕಟ್ಟಿ ತುದಿಗಳು ಹೊರಗಡೆ ಚಾಚುವಂತೆ ಬಿಟ್ಟಿರುತ್ತಿದ್ದು, ಅದರಿಂದಲೇ ಗಾಯಗಳಲ್ಲಿ ಕೀವಾಗುತ್ತದೆಂಬುದನ್ನು ಈ ಹಿಂದೆಯೇ ಪ್ರಸ್ತಾಪಿಸಲಾಗಿದೆಯೆಷ್ಟೆ. ಈ ಸಮಯದಲ್ಲಿ ದಾರಗಳನ್ನು ಬಿಸಿನೀರಿನಲ್ಲಿ ಕುದಿಸಿ ಜೀವಿ ಶುದ್ಧೀಕರಿಸುವ ಸಾಧ್ಯತೆಗಳಾದ ಮೇಲೆ, ಅವುಗಳನ್ನು ಯಥೇಚ್ಛವಾಗಿ ಬಳಸುವಂತಾಯಿತು. ಬಾಲ್ಟಿಮೋರ್ ಆಸ್ಪತ್ರೆಯಲ್ಲಿ (1882) ಆ ಪದ್ಧತಿ ಜಾರಿಗೆ ಬಂದಿತು. ಅದಕ್ಕೆ ಕಪ್ಪು ಬಣ್ಣದ ಅತೀ ಚಿಕ್ಕ ಸಿಲ್ಕ್ ದಾರವನ್ನು ಬಳಸಿ, ಅವುಗಳನ್ನೂ ಈ ರಕ್ತನಾಳಕ್ಕೆ ಹೊಂದಿಕೊಂಡಿರುವ ಮಟ್ಟದಲ್ಲೇ ಕತ್ತರಿಸಿ ತೆಗೆದುಬಿಡುತ್ತಿದ್ದರು. ಮುಂದೆ ಅವುಗಳಿಂದ ತೊಡಕಗಳೇನಾದರೂ ಉದ್ಭವಿಸಿದರೆ ಕಪ್ಪು ಬಣ್ಣವನ್ನು ಗುರುತಿಸಿ ಕತ್ತರಿಸಿ ಹೊರಗ ತೆಗೆಯಲು ಸಾಧ್ಯವಾಗುತ್ತಿತ್ತು.

ಪ್ರಪಂಚದಾದ್ಯಂತ ಲಿಸ್ಟರ್‌ನ ತತ್ವಗಳ ಮಹತ್ವವನ್ನರಿತು ಅದಕ್ಕೆ ಪೂರಕವಾಗಿ ಇಂತಹ ಬದಲಾವಣೆಗಳಾಗುತ್ತಿದ್ದುದನ್ನು ಅವನು ತೆರೆದ ಮನಸ್ಸಿನಿಂದ ಸ್ವೀಕರಿಸುತ್ತಿದ್ದ. ಆದರೆ ಬರೇ ಶಾಖ ಮತ್ತಿತರ ವ್ಯವಸ್ಥೆಗಳಿಂದಲೇ ಆಂಟಿಸೆಪ್ಟಿಕ್ ಶುಚಿತ್ವವನ್ನು ಸಾಧಿಸಬಹುದೆಂಬುದನ್ನು ನಂಬಲು ಅವನು ತಯಾರಿರಲಿಲ್ಲ. ಪೂರಕವಾಗಿ ಕಾರ್ಬಾಲಿಕ್ ಆಮ್ಲಂದಂಥ ರಾಸಾಯನಿಕ ಪದಾರ್ಥಗಳ ಬಳಕೆ ಮಾಡಲೇ ಬೇಕಾಗುತ್ತದೆಂಬುದು ಅವನ ಖಚಿತ ಅಭಿಪ್ರಾಯವಾಗಿತ್ತು. ''ಭೌತಿಕ ಶುಚಿತ್ವ'' (PHYSICAL CLEANLINESS) ಮತ್ತು ''ಶಸ್ತ್ರ ವೈದ್ಯಕೀಯ

ಶುಚಿತ್ವ'' (SURGICAL CLEANLINESS) ಎಂಬ ಕಲ್ಪನೆಗಳು ಬೇರೆ ಬೇರೆ ಎಂಬ ಬಗೆಗೆ ಸರಿಯಾದ ಅರಿವು ಇರಬೇಕಾಗುತ್ತದೆಂಬುದನ್ನು ಸಾರಿ ಸಾರಿ ಹೇಳುತ್ತಿದ್ದ.

ಲಿಸ್ಟರ್‌ನ ವೈಯಕ್ತಿಕ ಅಭಿಪ್ರಾಯಗಳೇನೇ ಇದ್ದರೂ, ರಾಸಾಯನಿಕ ಆಂಟಿಸೆಪ್ಟಿಕ್‌ಗಳ ದಕ್ಷತೆಯ ಬಗೆಗೆ ಅನುಮಾನಗಳಿಲ್ಲದಿರಲಿಲ್ಲ. ಧೂಳು ಮತ್ತು ಸಲಕರಣಗಳಿಗೆ ಸವರುತ್ತಿದ್ದ ವ್ಯಾಸಲೀನ್‌ನಂತಹ ಜಿಡ್ಡಿನಲ್ಲಿ ಹುದುಗಿಕೊಂಡಿರಬಹುದಾದ ರೋಗಾಣುಗಳ ಸಂಪೂರ್ಣ ನಾಶ, ಕಾರ್ಬಾಲಿಕ್ ಆಮ್ಲದಂತಹ ಸಾಮಗ್ರಿಗಳಿಂದಾಗುವುದಿಲ್ಲ ಎಂಬ ಅಭಿಪ್ರಾಯವೂ ಪ್ರಚಲಿತವಿತ್ತು. ಈ ಸಮಯದಲ್ಲಿ ರಾಬರ್ಟ್ ಕಾಖ್ ಸೂಕ್ಷ್ಮ ಜೀವಾಣುಗಳನ್ನು ನಾಶ ಮಾಡಲು ಕಾರ್ಬಾಲಿಕ್ ಆಮ್ಲ ಮತ್ತು ಇತರ ರಾಸಾಯನಿಕ ಆಂಟಿಸೆಪ್ಟಿಕ್‌ಗಳಲ್ಲದೇ ಇನ್ನೊಂದು ರೀತಿಯಿಂದಲೂ ಸಾಧ್ಯವಿದೆಯೆಂಬುದನ್ನು ತೋರಿಸಿಕೊಟ್ಟರು. ಬಿಸಿಯಾಗಿರುವ ''ಹಬೆ'' (HOT STEAM) ಸೂಕ್ಷ್ಮ ಜೀವಾಣುಗಳೇ ಅಲ್ಲದೆ ಅವುಗಳ ಕೋಶಾವಸ್ಥೆ ''ಸಿಸ್ಟ್''ಗಳನ್ನೂ ಸಹಾ ನಾಶಪಡಿಸುತ್ತವೆಂಬುದು ಅವರ ಸಂಶೋಧನೆಗಳಿಂದ ಶ್ರುತ ಪಟ್ಟಿತು. ರಾಸಾಯನಿಕ ಆಂಟಿಸೆಪ್ಟಿಕ್ ಬಳಕೆಯಿಂದ ಅವುಗಳ ಪೂರ್ಣನಾಶ ಸಾಧ್ಯವಾಗುತ್ತಿರಲಿಲ್ಲ. ಶಸ್ತ್ರ ಚಿಕಿತ್ಸೆಯ ಗಾಯಗಳಿಗೆ ಸೂಕ್ಷ್ಮ ಜೀವಾಣುಗಳು, ಅದರಲ್ಲಿ ಭಾಗವಹಿಸುವವರ ಕೈಗಳು, ಸಲಕರಣೆಗಳು ಹಾಗೂ ಬಟ್ಟೆ ಬರೆಗಳ ಮೂಲಕ ಸೋಂಕು ಉಂಟು ಮಾಡುವ ಸಾಧ್ಯತೆ ಗಳಿರುವುದನ್ನು ಆ ದಿಸೆಯಲ್ಲಿ ಕೆಲವರು ಯೋಚಿಸಿದರು. ಬರ್ಗ್‌ಮನ್‌ರ ಸಹಾಯಕ ಕರ್ಟ್ ಸ್ಕಿಮ್ಮೆಲ್ ಬುಶ್ ಎಂಬವರು ಅಂತಹ ಸಲಕರಣೆಗಳನ್ನು ಅತಿ ಹೆಚ್ಚು ಬಿಸಿಯಾದ ಹಬೆಯಲ್ಲಿಡುವ ಪ್ರಯೋಗಗಳನ್ನು ಜರುಗಿಸಿದರು. ಅವರು ಶಸ್ತ್ರಚಿಕಿತ್ಸೆಗೆ ಬಳಸುವ ಚಾಕು, ಕತ್ತರಿಗಳಂಥ ಸಲಕರಣೆಗಳು, ಬಟ್ಟೆಗಳು, ಹೊಲಿಗೆಗೆ ಬಳಸುವ ದಾರ ಮುಂತಾದವನ್ನು ಅತಿ ಹೆಚ್ಚಿನ ಶಾಖದ ಹಬೆಯೊಳಗಡೆ ಸ್ವಲ್ಪ ಕಾಲ ಇರುವ ಹಾಗೆ ಏರ್ಪಾಡು ಮಾಡಿದರು. ಅದೇ ಸಮಯದಲ್ಲಿ ಫ್ರಾನ್ಸಿನ ಟೆರ್ರಿಯರ್ ಎಂಬವರೂ ಸಹಾ ಇಂತಹದೇ ಪ್ರಯೋಗಗಳನ್ನು ಜರುಗಿಸಿ ಶಸ್ತ್ರ ಚಿಕಿತ್ಸೆಗೆ ಬಳಸುವ ಸಾಮಾನು ಸರಂಜಾಮುಗಳಲ್ಲಿ ಯಾವುದೇ ಸೂಕ್ಷ್ಮ ಜೀವಾಣುಗಳು ಜೀವಂತವಾಗಿ ಉಳಿಯದಂತೆ ಮಾಡುವುದರಲ್ಲಿ ಯಶಸ್ವಿಯಾದರು, ಈಗ ಎಲ್ಲಾ ಕಡೆ ಪ್ರಚಲಿತವಿರುವ ''ಹೆಚ್ಚು ಒತ್ತಡದ ಹಬೆ''

(HIGH PRESSURE STEAM) ಯಂತ್ರಗಳಿಗೆ ಈ ತತ್ವವೇ ನಾಂದಿಯಾಯಿತು. ಅಂತಹ ಯಂತ್ರದಲ್ಲಿ ಈ ಸಲಕರಣೆಗಳನ್ನಿರಿಸಿ ಕಾವು ಏರುವಂತೆ ಮಾಡಿದರೆ ಕೇವಲ ಅರ್ಧಗಂಟೆ ಒಳಗೇ ಸೂಕ್ಷ್ಮ ಜೀವಾಣುಗಳು ಮತ್ತು ಅವುಗಳ ಕೋಶಾವಸ್ಥೆಗಳು ಹೇಳ ಹೆಸರಿಲ್ಲದಂತೆ ನಾಶವಾಗುತ್ತವೆ. ಕೈಗಳಿಗೆ ಧರಿಸುವ ಗವಸುಗಳನ್ನು ಸಹಾ ಅವುಗಳಲ್ಲಿರಿಸಿ ಜೀವಿಶುದ್ಧೀಕರಿಸಬಹುದಾದುದರಿಂದ ಕೈಗಳ ಮುಖಾಂತರವೂ ಸೋಂಕು ತಗುಲಲು ಸಾಧ್ಯವಿಲ್ಲವೆಂದಾಯಿತು. ಕತ್ತರಿ, ಚಾಕುಗಳಂತಹ ಸಲಕರಣೆಗಳಿಗೆ ಹಿಂದೆ ಮರದಿಂದ ತಯಾರಿಸುತ್ತಿದ್ದ ಹಿಡಿಗಳಿರುತ್ತಿದ್ದವು. ಬಿಸಿಯ ವಾತಾವರಣವನ್ನು ತಾಳಲಾರದೆ ಅವು ಬಿರುಕು ಬಿಟ್ಟು ಒಡೆದು ಹೋಗುತ್ತಿದ್ದವು. ಅದನ್ನು ನಿವಾರಿಸಲು ಗುಸ್ತಾವ್ ನ್ಯೂಬರ್, ಕೇವಲ ಲೋಹಗಳಿಂದಲೇ ಅವುಗಳನ್ನು ತಯಾರಿಸಿದರು.

# ೧೪. ಆಧುನಿಕ ಶಸ್ತ್ರ ಚಿಕಿತ್ಸಾ ಕೊಠಡಿಗಳು

ಈ ವಿವರಣೆಗಳಿಗೆ ಪೂರಕವಾಗಿ ಪ್ರಸ್ತುತ ಶಸ್ತ್ರ ಚಿಕಿತ್ಸಾ ಕೊಠಡಿಗಳು ಸಜ್ಜಾಗಿರುವ ರೀತಿ ನೀತಿಗಳು ಮತ್ತು ಅಲ್ಲಿಯ ಏರ್ಪಾಡುಗಳ ಬಗೆಗೆ ಸಂಕ್ಷಿಪ್ತ ವಿವರಣೆ ಈ ಹಂತದಲ್ಲಿ ಸೂಕ್ತವೆನಿಸುತ್ತದೆ. ಇದೇ ಲೇಖಕನ ''ಸಾಮಾನ್ಯ ಶಸ್ತ್ರ ವೈದ್ಯದ ಕಾಯಿಲೆಗಳು'' ಎಂಬ ಇತ್ತೀಚಿನ ಪುಸ್ತಕದ ''ಶಸ್ತ್ರ ಚಿಕಿತ್ಸಾ ಕೊಠಡಿ'' ಎಂಬ ಭಾಗದಿಂದ ಕೆಳಗಿನ ಪರಿಚ್ಛೇದ ಉದ್ಧೃತವಾಗಿರುತ್ತದೆ.

''ಶುಚಿತ್ವದ ಮಹತ್ವದ ಬಗೆಗೆ ಸರಿಯಾದ ಅರಿವು ಇರದ ಈಗ ನೂರೈವತ್ತು ವರ್ಷಗಳವರೆಗೂ ಶಸ್ತ್ರ ಚಿಕಿತ್ಸೆಗಳನ್ನು ನಡೆಸಲು ನಿಗದಿತ ಸ್ಥಾನವೆಂಬುದಿರಲಿಲ್ಲ. ಎಲ್ಲೆಂದರಲ್ಲಿ ಈ ಚಿಕಿತ್ಸೆಗಳನ್ನು ನಡೆಸುತ್ತಿದ್ದರು. ರೋಗಿಯ ಮನೆಯಲ್ಲೇ ಒಂದು ಕೊಠಡಿ. ಹೋಟೆಲು ಮುಂತಾದ ಜಾಗಗಳಲ್ಲೇ ಅವು ಹೆಚ್ಚಾಗಿ ಜರುಗುತ್ತಿದ್ದುದು. ಇಂಗ್ಲೆಂಡಿನ ಜೋಸೆಫ್ ಲಿಸ್ಟರ್ (1867), ಗಾಯಗಳಲ್ಲಿ ನಂಜಾಗುವುದಕ್ಕೆ ಸುತ್ತಲ ವಾತಾವರಣದಲ್ಲಿರುವ ಸೂಕ್ಷ್ಮ ಜೀವಾಣುಗಳೇ ಕಾರಣವೆಂಬುದನ್ನು ಶ್ರುತ ಪಡಿಸಿದ ನಂತರ ಅತ್ಯಂತ ಶುಚಿಯಾದ ವಾತಾವರಣವಿರುವ ಪ್ರತ್ಯೇಕ ಜಾಗಗಳಲ್ಲೇ ಶಸ್ತ್ರ ಚಿಕಿತ್ಸೆಗಳನ್ನು ನಡೆಸುವ ಪದ್ಧತಿ ಜಾರಿಗೆ ಬಂದಿದೆ.

ಶಸ್ತ್ರ ಚಿಕಿತ್ಸೆಗಳನ್ನು ಜರುಗಿಸುವ ವಿಭಾಗ ಆಸ್ಪತ್ರೆಗಳಲ್ಲಿ ಈಗ ಅತ್ಯಂತ ಪ್ರಾಮುಖ್ಯತೆ ಪಡೆದ ಜಾಗವಾಗಿರುತ್ತದೆ. ದೇವಸ್ಥಾನಗಳ ಗರ್ಭಗುಡಿಗಿಂತಲೂ ಶ್ರೇಷ್ಠ ಹಾಗೂ ಪವಿತ್ರ ಸ್ಥಾನಮಾನ ಆಪರೇಷನ್ ಥಿಯೇಟರ್‌ಗಿದೆ. ಅವುಗಳ ನೆಲೆ, ವಿನ್ಯಾಸ ಮತ್ತು ನಿರ್ಮಾಣದ ವಿವರಗಳಿಗೆ ಹೆಚ್ಚಿನ ಗಮನ ಕೊಡಲಾಗುತ್ತದೆ. ಧೂಳು, ಕಸ, ಕೊಳೆ, ದುರ್ಗಂಧ, ಆ ವಠಾರದಲ್ಲಿ ಸುಳಿಯಲವಕಾಶವಿರುವುದಿಲ್ಲ. ಸೂಕ್ಷ್ಮ ಕ್ರಿಮಿ-ಕೀಟ, ನೊಣ, ಜಿರಲೆ, ನುಸುಳಲು ಸಾಧ್ಯವಾಗದಿರುವಂತೆ, ಕಿಟಕಿ ಬಾಗಿಲುಗಳ ವಿನ್ಯಾಸವಾಗಿರುತ್ತದೆ. ಈಗಿನ ಬಹುಪಾಲು ಶಸ್ತ್ರ ಚಿಕಿತ್ಸಾ ಕೊಠಡಿಗಳಲ್ಲಿ ಹವಾ ನಿಯಂತ್ರಣದ ವ್ಯವಸ್ಥೆಯಿರುತ್ತದೆ. ಹೊರ ವಾತಾವರಣದ ಗಾಳಿ ಸಹಾ ಒಳಗೆ ನುಗ್ಗದ ಹಾಗೆ ವ್ಯವಸ್ಥೆಯಿರುತ್ತದೆ. ವಿಶೇಷ ತರಹೆಯ ಕೆಲವು ಆಪರೇಷನ್ ಥಿಯೇಟರ್‌ಗಳಲ್ಲಿ ಒಳಗಡೆಯ ಗಾಳಿಯ ಒತ್ತಡ, ಹೊರಗಿನ ವಾತಾವರಣಕ್ಕಿಂತ ಹೆಚ್ಚಾಗಿದ್ದು ಒಳಗಿನಿಂದ ಗಾಳಿ ಹೊರ ಬರಬಹುದೇ

ಹೊರತು ಹೊರಗಿನಿಂದ ಒಳಗೆ ಗಾಳಿ ನುಗ್ಗದಂತಹ ವಿನ್ಯಾಸವಾಗಿರುತ್ತದೆ. ಕೊಠಡಿಯ ನೆಲ, ಗೋಡೆ, ಚಾವಣಿಗಳನ್ನು ಅತ್ಯಂತ ನುಣುಪಾಗಿಟ್ಟು, ಬಣ್ಣ ಬಳಿದು ಧೂಳು ಕೂರಲು ಅವಕಾಶಗಳಿರುವುದಿಲ್ಲ ದಂತಿರುತ್ತದೆ. ಅವಕ್ಕೆಲ್ಲಾ ಪ್ರತಿದಿನ ತೊಳೆದರೂ ಹಾಳಾಗದಂಥ ಸಾಮಗ್ರಿಗಳನ್ನು ಬಳಸಿರುತ್ತಾರೆ.

ಶಸ್ತ್ರಚಿಕಿತ್ಸೆಗೆ ಬಳಸುವ ಬಟ್ಟೆ ಬರೆ ಮತ್ತಿತರ ಶಸ್ತ್ರ-ಸಲಕರಣೆಗಳನ್ನು "ಜೀವಿ ಶುದ್ಧೀಕರಿಸುವ" (STERILIZATION) ವಿಭಾಗ ಪ್ರಧಾನ ಆಪರೇಷನ್ ಥಿಯೇಟರ್‌ಗೆ ಹೊಂದಿಕೊಂಡಿರುತ್ತದೆ. ಅದೇ ರೀತಿ ವೈದ್ಯರು, ದಾದಿಯರು, ಕೈ ಶುಚಿ ಮಾಡಿಕೊಳ್ಳುವ, ರೋಗಿಗೆ ಅರಿವಳಿಕೆ ನೀಡುವ, ಶಸ್ತ್ರ ಚಿಕಿತ್ಸೆ ನಂತರ ರೋಗಿ ಎಚ್ಚರಗೊಳ್ಳುವತನಕ ತೀವ್ರ ಆಸಕ್ತಿಯಿಂದ ಆರೈಕೆ ಮಾಡುವ ಶಸ್ತ್ರ ಚಿಕಿತ್ಸಾ ಸಾಮಾನು ಸರಂಜಾಮುಗಳನ್ನು ಶೇಖರಿಸಿಡುವ, ಕೊಳಕಾದ ಬಟ್ಟೆಗಳನ್ನು ಪ್ರತ್ಯೇಕವಾಗಿರುವ-ಸಲುವಾಗಿ ವಿವಿಧ ಕೊಠಡಿಗಳು ಈ ವಿಭಾಗಕ್ಕೆ ಹೊಂದಿಕೊಂಡಿರುತ್ತವೆ. ಇತ್ತೀಚಿನ ವರ್ಷಗಳಲ್ಲಿ ವಿವಿಧ ರೀತಿಯ ಶಸ್ತ್ರ ಚಿಕಿತ್ಸೆಗಳಿಗಾಗಿ ಹಲವಾರು ಆಪರೇಷನ್ ಥಿಯೇಟರುಗಳ ಸಮುಚ್ಚಯಗಳೇ ನಿರ್ಮಾಣವಾಗಿರುವುದುಂಟು.

ಶಸ್ತ್ರಚಿಕಿತ್ಸಾ ಕೊಠಡಿಯ ಮಧ್ಯಭಾಗದಲ್ಲಿ ಒಂದು ಅಥವಾ ಎರಡು ಆಪರೇಷನ್ ಟೇಬಲ್ಲುಗಳಿರುತ್ತವೆ. ಈ ಟೇಬಲ್ಲುಗಳ ವಿನ್ಯಾಸ, ರಚನೆಗಳು ಅತ್ಯಾಧುನಿಕ ಯಂತ್ರ ಕೌಶಲ್ಯದಿಂದ ತಯಾರಾಗಿರುತ್ತವೆ. ಅವನ್ನು ಮೇಲೆ ಕೆಳಗೆ ಏರಿಸಲು, ಯಾವ ಕಡೆ ಬೇಕಾದರೂ ತಿರುಗಿಸಲು ಅನುಕೂಲವಾಗುವಂತೆ ಹೈಡ್ರಾಲಿಕ್ ವ್ಯವಸ್ಥೆ ಇರುತ್ತದೆ.

ಶಸ್ತ್ರ ಚಿಕಿತ್ಸಾ ಕೊಠಡಿಯೊಳಗೆ ಹೊರಗಿನ ಗಾಳಿ ಬರದಂತೆ ಎಚ್ಚರ ವಹಿಸಿದ್ದರೂ ಬೆಳಕು ಯಥೇಚ್ಛವಾಗಿರುತ್ತದೆ. ಅತ್ಯಂತ ಪ್ರಕಾಶಮಾನವಾದ, ವಿಶೇಷ ತರಹೆಯ ಬಲ್ಬುಗಳನ್ನು ಅಳವಡಿಸಿದ ಶಾಖರಹಿತ ದೀಪಗಳನ್ನು ಮೇಲ್ಛಾವಣಿಗೆ ಹೊಂದಿಕೊಂಡಿರುವಂತೆ ಮಾಡಿರುತ್ತಾರೆ. ಜೊತೆಗೆ ಕೆಲವು ಚಲಿಸಬಹುದಾದ ದೀಪದ ಕಂಬಗಳೂ ಇರುತ್ತವೆ. ಬೇಕಾದ ಕಡೆ ಬೆಳಕು ಬೀಳುವಂತೆ ಇವುಗಳನ್ನು ಚಲಿಸಲು ಅನುಕೂಲವಾಗುವ ಹಾಗೆ ವಿನ್ಯಾಸಗೊಳಿಸಲಾಗಿರುತ್ತದೆ. ಶಸ್ತ್ರ ಚಿಕಿತ್ಸೆಯಲ್ಲಿ ಭಾಗವಹಿಸುವವರ ಕೈಗಳ

ನೆರಳು ಚಿಕಿತ್ಸೆ ನಡೆಯುತ್ತಿರುವ ಪ್ರದೇಶದಲ್ಲಿ ಬೀಳದಂತೆ ಬಲ್ಬುಗಳನ್ನು (SHADOWLESS) ಅಳವಡಿಸಿರುವುದು, ಇಲ್ಲಿಯ ಬೆಳಕಿನ ವ್ಯವಸ್ಥೆಯ ವೈಶಿಷ್ಟ್ಯ.

ಆಪರೇಷನ್ ಟೇಬಲ್ಲಿನ ಹತ್ತಿರದಲ್ಲೇ ಅರಿವಳಿಕೆ ನೀಡುವ ಮತ್ತು ಹೃದಯ, ಶ್ವಾಸಕೋಶಗಳ ಕಾರ್ಯವನ್ನು ವೀಕ್ಷಿಸುವ ಯಂತ್ರೋಪಕರಣಗಳನ್ನು ಜೋಡಿಸಿ ಇಟ್ಟಿರುತ್ತಾರೆ.

ಶಸ್ತ್ರ ಚಿಕಿತ್ಸೆಗೆ ಉಪಯೋಗಿಸುವ ಉಪಕರಣಗಳು ಅತ್ಯಂತ ನಯ, ನಾಜೂಕಾದ ವಿಶಿಷ್ಟ ದರ್ಜೆಯ ಲೋಹಗಳಿಂದ ತಯಾರಾಗಿರುತ್ತವೆ. ಅವು ಬಹಳ ಪರಿಶುದ್ಧವಾಗಿರಬೇಕಾಗುತ್ತದೆ. ಅದಕ್ಕಾಗಿ ಪೂತಿನಾಶಕ ದ್ರವಗಳಲ್ಲಿ (ANTISEPTIC LOTION) ಅವನ್ನು ಸದಾ ಅದ್ದಿರುತ್ತಾರೆ. ಇಲ್ಲವೆ ಹೆಚ್ಚು ಒತ್ತಡದ ಆವಿಯಂತ್ರ (HIGH PRESSURE STEAM STERILIZER) ಗಳಲ್ಲಿಟ್ಟು ಜೀವಿ ಶುದ್ಧಿಕರಿಸುತ್ತಾರೆ.

ಶಸ್ತ್ರ ಚಿಕಿತ್ಸಾ ಕಾರ್ಯದಲ್ಲಿ ಭಾಗವಹಿಸುವ ವೈದ್ಯರು, ದಾದಿಯರು, ಮತ್ತಿತರ ಸಹಾಯಕ ಸಿಬ್ಬಂದಿ ವರ್ಗದವರು ಶುದ್ಧೀಕರಿಸಿದ ಬಟ್ಟೆಯ ಮುಖವಾಡಗಳನ್ನು ಧರಿಸಿರುತ್ತಾರೆ. ಅವರೆಲ್ಲರ ಬಾಯಿ ಮೂಗು ಗಳಲ್ಲಿರಬಹುದಾದ ಸೂಕ್ಷ್ಮ ಜೀವಾಣುಗಳು ರೋಗಿಯ ಗಾಯದೊಳಗೆ ಸೇರಲವಕಾಶವಿರದಂತೆ ಅಡಚಣೆಯುಂಟು ಮಾಡುವುದು ಇದರ ಉದ್ದೇಶ,ಅವರ ಮೂಗು, ಬಾಯಿ ಗಂಟಲುಗಳಿಂದ ದ್ರವಗಳನ್ನು ತೆಗೆದು ಅಲ್ಲಿ ನೆಲೆಯಾಗಿರುವ ರೋಗಾಣುಗಳ ಬಗೆಗೂ ಆಗಾಗ್ಗೆ ಪರೀಕ್ಷೆಗಳನ್ನು ನಡೆಸುತ್ತಿರುತ್ತಾರೆ. ಆಪರೇಷನ್ ಥಿಯೇಟರನ್ನು ಆಗಾಗ್ಗೆ ಪೂತಿನಾಶಕ ದ್ರವಗಳಿಂದ ತೊಳೆಯುತ್ತಾರಲ್ಲದೆ, ಕ್ರಿಮಿನಾಶಕ ಮದ್ದುಗಳನ್ನಿರಿಸಿ, ಅವು ಆವಿಯಾಗಿ ಕೊಠಡಿಯ ವಾತಾವರಣದಲ್ಲಿ ಬೆರೆತು ಹೋಗುವಂತೆ ಮಾಡುತ್ತಾರ (FUMIGATION) ಅದರೊಳಗೆ ಪ್ರವೇಶಿಸುವವರೆಲ್ಲಾ ಶುದ್ಧೀಕರಿಸಿದ ಬಟ್ಟೆ ಮತ್ತು ಚಪ್ಪಲಿಗಳನ್ನು ಧರಿಸಿಕೊಂಡಿರಬೇಕಾಗುತ್ತದೆ.

ಶಸ್ತ್ರ ಚಿಕಿತ್ಸಾ ಕಾರ್ಯದಲ್ಲಿ ನೇರವಾಗಿ ಭಾಗವಹಿಸುವ ವೈದ್ಯರು, ದಾದಿಯುರು ಮತ್ತು ಸಹಾಯಕರುಗಳೆಲ್ಲಾ ಮುಖವಾಡವನ್ನು ಧರಿಸಿದ ನಂತರ

ತಂತಮ್ಮ ಕೈಗಳನ್ನು ಮುಂಗೈನ ಮೇಲ್ಭಾಗದವರೆಗೂ ಪೂತಿನಾಶಕ ಸಾಬೂನು ಮತ್ತು ಬ್ರಷ್‌ಗಳಿಂದ 15-20 ನಿಮಿಷ ಉಜ್ಜಿ ತೊಳೆದುಕೊಳ್ಳಬೇಕೆಂಬ ಕಡ್ಡಾಯ ನಿಯಮವಿದೆ. ನಂತರ ಜೀವಿ ಶುದ್ಧೀಕರಿಸಿದ ನಿಲುವಂಗಿಗಳನ್ನು ತೊಟ್ಟು, ಕೈಗಳಿಗೆ ರಬ್ಬರ್ ಅಥವಾ ಲೇಟೆಕ್ಸ್‌ಗಳಿಂದ ತಯಾರಿಸಿದ ಗವಸುಗಳನ್ನು ಹಾಕಿಕೊಳ್ಳುತ್ತಾರೆ.

ಇಷ್ಟರಲ್ಲೇ ಅರಿವಳಿಕಾ ತಜ್ಞರು ರೋಗಿಗೆ ಅರಿವಳಿಕೆ ನೀಡುವ ವ್ಯವಸ್ಥೆ ಮಾಡಿರುತ್ತಾರೆ. ಶಸ್ತ್ರ ಚಿಕಿತ್ಸೆಗೆ ಸಹಾಯಮಾಡುವ ದಾದಿಯೂ ಸಹಾ ಜೀವಿ ಶುದ್ಧೀಕರಿಸಿದ ಬಟ್ಟೆ, ಬರೆ, ಮತ್ತಿತರ ಸಲಕರಣೆಗಳನ್ನು ಪ್ರತ್ಯೇಕ ಟೇಬಲ್ಲೊಂದರಲ್ಲಿ ಜೋಡಿಸಿ ಸಜ್ಜಾಗಿರಿಸಿಕೊಂಡು ನಿಂತಿರುತ್ತಾಳೆ. ನಿಗದಿತ ಶಸ್ತ್ರ ಚಿಕಿತ್ಸೆಗಾಗಿ ತೆಗೆದಿರಿಸಿಕೊಂಡ ಬಟ್ಟೆ, ಬರೆ ಮತ್ತು ಇತರ ಸಲಕರಣೆಗಳ ವಿವರವಾದ ಪಟ್ಟಿಯನ್ನು ಸ್ಲೇಟೊಂದರಲ್ಲಿ ಬರೆದು ಆಕೆಯ ಎದುರಿನ ಗೋಡೆಯಲ್ಲಿ ನೇತುಹಾಕುವ ವ್ಯವಸ್ಥೆಯಾಗಿರುತ್ತದೆ. ಶಸ್ತ್ರ ಚಿಕಿತ್ಸೆಗೊಳಗಾದವರ ಹೊಟ್ಟೆಯಲ್ಲಿ ಚಾಕು, ಕತ್ತರಿಗಳು, ಆಕಸ್ಮಾತ್ತಾಗಿ ಉಳಿದುಕೊಳ್ಳುವ ಸಾಧ್ಯತೆಯನ್ನು ಹೊರತುಪಡಿಸಲು ಈ ವ್ಯವಸ್ಥೆ ಸಹಕಾರಿಯಾಗುತ್ತದೆ.

ರೋಗಿ ಸಂಪೂರ್ಣವಾಗಿ ಪ್ರಜ್ಞಾಹೀನವಾದ ಸೂಚನೆ ಅರಿವಾಳಿಕಾ ತಜ್ಞರಿಂದ ಬಂದ ಕೂಡಲೇ ಶಸ್ತ್ರ ಚಿಕಿತ್ಸೆಗೆ ತೆರೆಯುವ ಜಾಗ ಮತ್ತು ಅದರ ಸುತ್ತ ಮುತ್ತಲ ಪ್ರದೇಶವನ್ನು ಪೂತಿನಾಶಕ ದ್ರಾವಣದಿಂದ ಶುಚಿಗೊಳಿಸಲಾಗುತ್ತದೆ. ನಂತರ ಕತ್ತರಿಕೆ ಮಾಡುವ ಜಾಗವನ್ನು ಹೊರತುಪಡಿಸಿ, ರೋಗಿಯ ಇನ್ನುಳಿದ ಭಾಗವನ್ನೆಲ್ಲಾ ಜೀವಿ ಶುದ್ಧೀಕರಿಸಿದ ಬಟ್ಟೆಗಳಿಂದ ಮುಚ್ಚಲಾಗುತ್ತದೆ.

''ಲಿಸ್ಟರ್ ಮೊದಲಿನ ಕಾಲ'' (ಅಧ್ಯಾಯ 6) ಎಂಬ ಅಧ್ಯಾಯದಲ್ಲಿ ಈಗ್ಗೆ ಕೇವಲ ನೂರೈವತ್ತು ವರ್ಷಗಳ ಹಿಂದೆ ಶಸ್ತ್ರ ಚಿಕಿತ್ಸೆಗಳು ಜರುಗುತ್ತಿದ್ದ ರೀತಿ ನೀತಿಗಳು ಅವುಗಳನ್ನು ಕೈಗೊಳ್ಳುತ್ತಿದ್ದ ತಾಣಗಳು, ಶಸ್ತ್ರವೈದ್ಯರೆನಿಸಿಕೊಂಡವರ ನಡವಳಿಕೆ ಮುಂತಾದವನ್ನು ಅವಲೋಕಿಸಿದಾಗ ಆಂಟಿಸೆಪ್ಟಿಕ್-ಏಸೆಪ್ಟಿಕ್ ನಿಯಮಗಳ ಉಗಮದಿಂದುಂಟಾಗಿರುವ ಪ್ರಗತಿಯ ಅರಿವಾಗಬಹುದು. ಪ್ರಸ್ತುತ ಲಿಸ್ಟರ್ ಬಳಸುತ್ತಿದ್ದ ಕಾರ್ಬಾಲಿಕ್ ಆಮ್ಲಕ್ಕಿಂತಲೂ ಸಾವಿರ ಪಾಲು ಹೆಚ್ಚಿನ ಸತ್ವವಿರುವ ಪೂತಿನಾಶಕ ದ್ರವ ಅಥವಾ ಅನಿಲಗಳು ಲಭ್ಯವಿವೆ. ಆಪರೇಷನ್ ಥಿಯೇಟರಗಳಲ್ಲಿನ ಜೀವಿಶುದ್ಧೀಕರಿಸುವ ವ್ಯವಸ್ಥೆ ಈಗ ತನ್ನ ಪರಾಕಾಷ್ಠತೆಯನ್ನು

ತಲುಪಿದ್ದರ ಪ್ರತೀಕವಾಗಿ, ಕೆಲವು ಕೇಂದ್ರಗಳಲ್ಲಿ ಶಸ್ತ್ರ ಚಿಕಿತ್ಸೆಗೊಳಗಾದವರಿಗೆ ಜೀವಿರೋಧಕ ಮದ್ದುಗಳನ್ನು ನೀಡುವ ಪರಿಪಾಠವನ್ನು ಕೈ ಬಿಡಲಾಗಿದೆ. ಗಾಯಗಳಲ್ಲಿ ಸೋಂಕಿನ ಲವಲೇಶಗಳೂ ಇಲ್ಲದೆ, ಅವು ಪ್ರಥಮ ಉದ್ದೇಶದಿಂದಲೇ ವಾಸಿಯಾಗುತ್ತಿವೆ. ಇಪ್ಪತ್ತನೆಯ ಶತಮಾನದಲ್ಲಿ ವೈದ್ಯಕೀಯ ಮತ್ತು ವೈಜ್ಞಾನಿಕ ಕ್ಷೇತ್ರಗಳಲ್ಲುಂಟಾದ ಅಗಾಧ ಪ್ರಗತಿಗಳಿಂದ ಮಾನವ ಚಂದ್ರಲೋಕಕ್ಕೆ ಪದಾರ್ಪಣೆ ಮಾಡಿದಷ್ಟೇ ಮಹತ್ತರದ ಹೃದಯ ಮತ್ತಿತರ ಜೀವಾಳ ಅವಯವಗಳ ನಾಟಿ ಶಸ್ತ್ರಚಿಕಿತ್ಸೆ ಸಾಧ್ಯವಾಗಿರುವುದು. ಆಂಟಿಸೆಪ್ಟಿಕ್ ನಿಯಮಗಳ ಆಚರಣೆ ಈ ದಿಸೆಯಲ್ಲಿ ಅತ್ಯಂತ ನಿರ್ಣಾಯಕ ಪಾತ್ರವಹಿಸಿದೆ ಎಂಬುದು ನಿರ್ವಿವಾದ. ಜೋಸೆಫ್ ಲಿಸ್ಟರ್ ಆ ನಿಯಮಗಳ ಆದ್ಯ ಪ್ರವರ್ತಕನೆಂಬುದನ್ನು ಮರೆಯಲಾಗದು. ಆಂಟಿಸೆಪ್ಟಿಕ್ ಯುಗ ಪ್ರವರ್ತಕ ಲಿಸ್ಟರ್‌ಗೆ ಮಾನವ ಕುಲ ಎಷ್ಟು ಋಣಿಯಾಗಿದ್ದರೂ ಸಾಲದೆನಿಸುತ್ತದೆ.

ಜೋಸೆಫ್ ಲಿಸ್ಟರ್ ಸುಮಾರು ಮೂರು ದಶಕಗಳಿಂದ ಗಾಯಗಳಲ್ಲಿ ನಂಜಾಗುವುದಕ್ಕೆ ಅಗೋಚರ ಸೂಕ್ಷ್ಮ ಜೀವಾಣುಗಳು ಕಾರಣವಿರಬಹುದೆಂಬ ಅನುಮಾನದಿಂದ ಅವುಗಳ ವಿರುದ್ಧ ಸಮರವನ್ನೇ ಸಾರಿದ್ದ. ಅಂತಹ ಸೂಕ್ಷ್ಮ ಜೀವಾಣುಗಳನ್ನು ಪ್ರದರ್ಶಿಸಲಾಗದಿದ್ದರೂ, ಅವುಗಳನ್ನು ನಾಶಪಡಿಸಲು ಆಂಟಿಸೆಪ್ಟಿಕ್ ವಿಧಾನಗಳನ್ನು ಮುಂದೊಡ್ಡಿ ಆ ದಿಸೆಯಲ್ಲಿ ಸಾಕಷ್ಟು ಯಶಸ್ಸನ್ನೂ ಪಡೆದುಕೊಂಡಿದ್ದ. ಅಗೋಚರ ಶತ್ರುಗಳ ವಿರುದ್ಧ ಅವನು ವಿಜಯಿಯಾಗುತ್ತಿದ್ದರೂ ತನ್ನ ಎದುರಿಗೆ ತನ್ನೊಡನೆಯೇ ಇರುತ್ತಿದ್ದ ವೃತ್ತಿಬಾಂಧವ ವೈರಿಗಳು ಅವನ ತತ್ವಗಳನ್ನು ತೆರೆದ ಮನಸ್ಸಿನಿಂದ ಒಪ್ಪಲು ತಯಾರಿರಲ್ಲ, ಅದೊಂದು ಲಿಸ್ಟರ್‌ಗೆ ಸದಾ ವಿಷಾದ ಪಡುವ ಸಂಗತಿಯಾಗಿತ್ತು. ಅಂಧ ಶ್ರದ್ಧೆ, ಮೂಢನಂಬಿಕೆ, ಸ್ವಪ್ರತಿಷ್ಠೆ, ಅಸೂಯೆ ಮತ್ತು ಹಠಮಾರಿತನ ಆ ಕಾಲದ ವೈದ್ಯಲೋಕದ ಗಣ್ಯರೆನಿಸಿಕೊಂಡವರನ್ನಾವರಿಸಿಕೊಂಡಿದ್ದವು. ವಿಪರ್ಯಾಸದ ಸಂಗತಿಯೆಂದರೆ, ಸ್ವದೇಶದ ಹಲವು ವೈದ್ಯ ಮುಖಂಡರು ಲಿಸ್ಟರ್‌ನ ಆಂಟಿಸೆಪ್ಟಿಕ್ ನಿಯಮಗಳನ್ನು ಯಾವ ಯಾವುದೋ ಕಾರಣಗಳನ್ನೊಡ್ಡಿ ತಿರಸ್ಕರಿಸುತ್ತಿದ್ದರು. ಸಮಯ ಸಿಕ್ಕಾಗಲೆಲ್ಲಾ ಖಂಡಿಸುತ್ತಿದ್ದರು; ಅವನನ್ನು ಹೀಯಾಳಿಸಿ, ಅವಮಾನಗೊಳಿಸುತ್ತಿದ್ದರು. ಆದರೆ, ವಿದೇಶಗಳಲ್ಲಿ ಅದರಲ್ಲೂ ಯುರೋಪಿನ ಹಲವು ಕೇಂದ್ರಗಳಲ್ಲಿ ಲಿಸ್ಟರ್‌ನ ಲೇಖನಗಳನ್ನು ಓದಿದವರು, ಸಮಾವೇಶಗಳಲ್ಲಿ

ಅವರ ಭಾಷಣಗಳನ್ನು ಕೇಳಿದವರು, ಆಂಟಿಸೆಪ್ಟಿಕ್ ತತ್ವಗಳನ್ನು ಕಟ್ಟು ನಿಟ್ಟಾಗಿ ಆಚರಿಸಿ ಒಳ್ಳೆಯ ಫಲಿತಾಂಶಗಳನ್ನು ಪಡೆಯುತ್ತಿದ್ದರು. ಅವುಗಳಿಗೆ ತಮ್ಮದೇ ಆದ ಕೆಲವು ಮಾರ್ಪಾಡುಗಳನ್ನು ಮಾಡಿ ಫಲಿತಾಂಶಗಳನ್ನು ಉತ್ತಮಪಡಿಸಲು ಪ್ರಯತ್ನಿಸುತ್ತಿದ್ದರು. ಆ ತನಕ ಲಿಸ್ಟರ್ ಒಬ್ಬಂಟಿಯಾಗಿ ಹೋರಾಡುತ್ತಿದ್ದ ಕಾಳಗಕ್ಕೆ ಪ್ರಪಂಚದ ವಿವಿಧ ಕಡೆಗಳಿಂದ ಯೋಧರು ಬಂದು ಸೇರಿದರು, ತಮ್ಮೊಡನೆ ಮದ್ದು ಗುಂಡುಗಳನ್ನು ತಂದರು. ಮೊದಲೇ ಹಿಮ್ಮೆಟ್ಟುತ್ತಿದ್ದ ಅಗೋಚರ ಶತ್ರುಗಳು ಪಲಾಯನ ಮಾಡುವುದು ಅನಿವಾರ್ಯವಾಯಿತು. ಸ್ವದೇಶದಲ್ಲಿ ಇನ್ನೂ ಪರೋಕ್ಷವಾಗಿ ಹಿಂಗಾಪು ಕದನದಲ್ಲಿ ನಿರತರಾಗಿದ್ದ ವೈರಿಗಳೂ ಸಹಾ ತಮ್ಮ ಸೋಲನ್ನು ಒಪ್ಪಿಕೊಳ್ಳಲೇಬೇಕಾಯಿತು. ಅದರಲ್ಲೂ ಯುರೋಪಿನಲ್ಲಿ ರಾರ್ಬರ್ಟ್ ಕಾಕ್ ಸೂಕ್ಷ್ಮ ಜೀವಾಣುಗಳನ್ನು ಸೂಕ್ಷ್ಮ ದರ್ಶಕದಲ್ಲಿ ಪ್ರದರ್ಶಿಸಿ ಸೆರೆಹಿಡಿದು ಗಾಜಿನ ಬಿಲ್ಲೆಗಳಿಗೆ ಅಂಟಿಸಿ, ಬಣ್ಣಹಾಕಿ ಅವುಗಳ ಷಡ್ಯಂತ್ರಗಳನ್ನು ಬಟಾಬಯಲಿಗೆಳೆದಾಗ ಆಂಟಿಸೆಪ್ಟಿಕ್ ನಿಯಮಗಳ ಆಚರಣೆಗೆ ಯಾವ ಅಡ್ಡಿ ಆತಂಕಗಳೂ ಉಳಿಯಲಿಲ್ಲ. ಅವುಗಳನ್ನು ವಿರೋಧಿಸುತ್ತಿದ್ದವರೆಲ್ಲಾ ಈಗ ಯಾವ ತಕರಾರುಗಳನ್ನೂ ಎತ್ತದೆ ಆಂಟಿಸೆಪ್ಟಿಕ್ ನಿಯಮಗಳಿಗೆ ಶರಣಾಗತರಾದರು. ಬ್ರಿಟನ್ನಿನ ಎಲ್ಲಾ ಕಡೆ ಅವು ಆಚರಣೆಗೆ ಬರುವಂತಾಯಿತು. ಹಿಂದಿನ ವೈರಿಗಳೆಲ್ಲಾ ಈಗ ಅವನ ಆರಾಧಕರೇ ಆಗಿಬಿಟ್ಟರು. ಲಿಸ್ಟರ್‌ನ ಜೀವನ ಸಾರ್ಥಕಪಡೆಯಿತು. ಅವನ ಕೀರ್ತಿ ಪತಾಕೆ ಗಗನ ಚುಂಬಿಸಿ ಹಾರಾಡಿತು. ಲಿಸ್ಟರ್ ಹೆಸರು ಮನೆಮಾತಾಯಿತು "ಲಿಸ್ಟರಿಸಂ" (LISTERISM) ಎಂಬ ಹೊಸ ಪದದ ಜನನವಾಯಿತು.

ಲೂಯಿ ಪ್ಯಾಶ್ಚರ್ ಮತ್ತು ಸ್ವತಃ ತಾನು ವಾತಾವರಣದಲ್ಲಿರುವ ಸೂಕ್ಷ್ಮ ಜೀವಾಣುಗಳ ಬಗೆಗೆ ಅನುಮೋದಿಸುತ್ತಿದ್ದುದನ್ನು ರಾರ್ಬರ್ಟ್ ಕಾಖ್ ಅಕ್ಷರಶಃ ತೋರಿಸಿಕೊಟ್ಟದ್ದು ಲಿಸ್ಟರ್‌ನ ಪ್ರತಿಪಾದನೆಗಳಿಗೆ ಅತಿ ಹೆಚ್ಚು ಸಹಾಯಕವಾಯಿತು. ಲಿಸ್ಟರ್ ತನ್ನ ನಿಯಮಗಳನ್ನು ಅತ್ಯಂತ ಅಧಿಕಾರಯುತವಾಗಿ ಮುಂದಿಡಲು ಅದು ನೆರವಾಯಿತಲ್ಲದೆ, ಇನ್ನೂ ಹೊಸ ಹುರುಪಿನಿಂದ ಕಾರ್ಯೋನ್ಮುಖವಾಗುವಂತೆ ಮಾಡಿತು. ಆ ದಿಸೆಯಲ್ಲಿ ಎಲ್ಲಾ ಕಡೆ ಜರುಗುತ್ತಿದ್ದ ಸಂಶೋಧನೆಗಳ ಕಡೆ ಗಮನವಿರಿಸಿಕೊಂಡಿರುತ್ತಿದ್ದ. ಅವುಗಳೊಡನೆ ತನ್ನ ಅಭಿಪ್ರಾಯಗಳನ್ನು ತುಲನೆ ಮಾಡಲು ಸದಾ ಪ್ರಯತ್ನಿಸುತ್ತಲೇ ಇರುತ್ತಿದ್ದ. ಆಗ ತಾನೆ ಬೆಳಕಿಗೆ ಬರುತ್ತಿದ್ದ

ಸೂಕ್ಷ್ಮ ಜೀವಾಣುಗಳು (ಮಿಣಿ ಜೀವಿಗಳ) ಅಭ್ಯಾಸ ''ಮಿಣಿ ಜೀಪಶಾಸ್ತ್ರ'' (BACTERIOLOGY) ಅವನ ತೀವ್ರ ಗಮನ ಸೆಳೆಯಿತು. ಅವನಲ್ಲಿದ್ದ ಸೂಕ್ಷ್ಮ ದರ್ಶಕ ಯಂತ್ರ ಈಗ ಪ್ರತಿದಿನ ಬಳಸುವ ಉಪಕರಣವಾಯಿತು. ಗಾಯಗಳ ಕೀವಿನಲ್ಲಿ ಹಲವು ಮಿಣಿಜೀವಿಗಳನ್ನು ಗುರುತಿಸುತ್ತಿದ್ದನಲ್ಲದೆ ಆ ಬಗೆಗೆ ಇತರ ವಿಜ್ಞಾನಿಗಳು ಪ್ರಕಟಿಸುತ್ತಿದ್ದ ಅವಲೋಕನಗಳನ್ನು ತಪ್ಪದೇ ಗಮನಿಸುತ್ತಿದ್ದ. ಲೂಯಿ ಪ್ಯಾಶ್ಚರ್ ಅವರ ಮಾರ್ಗದರ್ಶನದಲ್ಲಿ ಕಾರ್ಯನಿರತನಾಗಿದ್ದ ಎಲೀಮೆಟ್ನಿಕಾಫ್ (ELIE METCHNI KOFF) ಪ್ರತಿಪಾದಿಸುತ್ತಿದ್ದ ತತ್ವ, ಲಿಸ್ಟರ್‌ನ ಎಷ್ಟೋ ದಿನಗಳ ಅನುಮಾನಗಳಿಗೆ ಉತ್ತರ ದೊರಕಿಸಿತು. ರಕ್ತದಲ್ಲಿರುವ ಕೆಲವು ಬಗೆಯ ಬಿಳಿ ರಕ್ತಕಣಗಳು ಗಾಯ ಅಥವಾ ರಕ್ತಕ್ಕೆ ಸೇರುವ ಸೂಕ್ಷ್ಮ ಜೀವಾಣುಗಳನ್ನು ನುಂಗಿ ನಾಶಪಡಿಸುವದನ್ನು ಮೆಟ್ನಿಕಾಫ್ ತೋರಿಸಿಕೊಟ್ಟರು. ಜೀವಂತ ಊತಕಗಳೇ, ಸೂಕ್ಷ್ಮ ಜೀವಾಣುಗಳು ವೃದ್ಧಿಯಾಗಿ ಬೆಳವಣಿಗೆ ಯಾಗುವುದನ್ನು ತಡೆಯುವುದಕ್ಕೂ ಕಾರಣವಾಗಬಹುದೆಂಬ ಲಿಸ್ಟರ್‌ನ ಬಹುದಿನಗಳ ಅನಿಸಿಕೆಗೆ ಇದು ಒತ್ತುಕೊಟ್ಟಿತು. ಉದರಕೋಶದೊಳಗಿನ ಪರಿಸ್ಥಿತಿಗಳನ್ನು ಶಸ್ತ್ರ ಚಿಕಿತ್ಸೆಗೊಳಪಡಿಸುವಾಗ ಸ್ಪೆನ್ಸರವೆಲ್ಸ್ ಮತ್ತು ಲಾಸನ್ ಟೈಟ್‌ರಂತಹವರು ಬರೀ ಶುಚಿತ್ವದ ನಿಯಮಗಳ ಆಚರಣೆಯಿಂದಲೇ ಒಳ್ಳೆಯ ಫಲಿತಾಂಶಗಳನ್ನು ಪಡೆಯುತ್ತಿರುವ ಗುಟ್ಟು ಇದೇ ಆಗಿರಬಹುದೆಂಬುದೀಗ ಅವನಿಗೆ ಹೊಳೆಯಿತು. ಈ ಕಾರಣದಿಂದಲೇ ವಾತಾವರಣದಲ್ಲಿನ ಮಿಣಿ ಜೀವಿಗಳ ನಾಶಕ್ಕಾಗಿ ಬಳಸುತ್ತಿದ್ದ ಕಾರ್ಬಾಲಿಕ್ ಆಮ್ಲದ ಸ್ಪ್ರೇ ಅಷ್ಟೇನೂ ಪ್ರಯೋಜನಕಾರಿಯಾಗಲಾರದೆಂದು ಭಾವಿಸಿ ಅದನ್ನು ನಿಲ್ಲಿಸಲೂ ಲಿಸ್ಟರ್ ಹಿಂಜರಿಯಲಿಲ್ಲ. ಲಿಸ್ಟರ್ ಯಾವುದೇ ವಿಷಯವನ್ನು ಅದೆಷ್ಟು ಪೂರ್ಣ ನಂಬಿಕೆಯಿಂದ ಪ್ರತಿಪಾದಿಸುತ್ತಿದ್ದರೂ, ಅಂತಹುಗಳಲ್ಲಿ ಹುರುಳಿಲ್ಲವೆಂದು ಕಂಡುಬಂದರೆ ಅವುಗಳನ್ನು ತ್ಯಜಿಸುತ್ತಿದ್ದನೆಂಬುದಕ್ಕೆ ಇದೊಂದು ಉತ್ತಮ ಉದಾಹರಣೆ.

ಬರ್ಲಿನ್‌ನಲ್ಲಿ 1890ರಲ್ಲಿ ಸಮಾವೇಶಗೊಂಡ ಇಂಟರ್ ನ್ಯಾಷನಲ್ ಮೆಡಿಕಲ್ ಕಾಂಗ್ರೆಸ್‌ಗೆ ಲಿಸ್ಟರ್ ವಿಶೇಷ ಆಹ್ವಾನಿತನಾಗಿ ಹೋಗಿದ್ದ; ತಾನು ಪ್ರತಿಪಾದಿಸುತ್ತಿದ್ದ ಆಂಟಿಸೆಪ್ಟಿಕ್ ನಿಯಮಗಳು ಶಸ್ತ್ರ ಚಿಕಿತ್ಸಾ ವಿಧಾನಗಳಲ್ಲುಂಟು ಮಾಡುತ್ತಿರುವ ಪ್ರಗತಿಗಳ ಬಗೆಗೆ ಪೂರ್ಣ ವರದಿಯನ್ನೊಳಗೊಂಡಿತ್ತು, ಅವನ ಭಾಷಣ. ಅದರಲ್ಲಿ ಕಾಖ್, ಪ್ಯಾಶ್ಚರ್ ಮತ್ತು ಮೆಟ್ನಿಕಾಫ್‌ರ ಇತ್ತೀಚಿನ

ಸಂಶೋಧನೆಗಳಿಂದಾದ ಪ್ರತಿಫಲಗಳನ್ನು ವಿಶೇಷವಾಗಿ ಉಲ್ಲೇಖಿಸಿದ್ದ. ಮುಂದಿನ ವರ್ಷ ಲಂಡನ್‌ನಲ್ಲಿ ಸಮಾವೇಶಗೊಂಡ (1891) ಇಂಟರ್ ನ್ಯಾಷನಲ್ ಆರೋಗ್ಯ ಶಾಸ್ತ್ರದ ಕಾಂಗ್ರೆಸ್‌ನಲ್ಲಿ ಪ್ರಮುಖ ಪಾತ್ರ ಅವನದೇ ಆಗಿತ್ತು. ಮಿಣಜೀವ ಶಾಸ್ತ್ರ ವಿಭಾಗದಲ್ಲಿನ ಚರ್ಚೆಗಳು ಲಿಸ್ಟರ್‌ನ ನೇತೃತ್ವದಲ್ಲೇ ಜರುಗಿದ್ದು ಒಂದು ವೈಶಿಷ್ಟ್ಯ. ''ಮರೆವಣಿ'' ತತ್ವಗಳ (IMMUNITY) ವಿಷಯದಲ್ಲಿ ಜರುಗಿದ ವಿಚಾರ ಸಂಕಿರಣದಲ್ಲಿ ಪ್ರಪಂಚದಾದ್ಯಂತ ಬಂದ ಹಲವು ತಜ್ಞರು ಭಾಗವಹಿಸಿದ್ದರು. ಅದರಲ್ಲೂ ಲಿಸ್ಟರ್‌ನ ಪಾತ್ರ ಪ್ರಾಮುಖ್ಯತೆ ಪಡೆದಿತ್ತು.

ಜೋಸಫ್ ಲಿಸ್ಟರ್‌ಗೆ ಈಗ (1892) ಅರವತ್ತೈದು ವರ್ಷಗಳಾಗುವುದರಲ್ಲಿದ್ದು ನಿವೃತ್ತಿಯ ಕಾಲ; ಆದರೂ ಮುಂದೆ ಇನ್ನೂ ಒಂದು ವರ್ಷ (1893) ದವರೆಗೂ ಕಿಂಗ್ಸ್ ಕಾಲೇಜಿನ ಹುದ್ದೆಯಲ್ಲಿ ಮುಂದುವರಿಯಲು ಅವಕಾಶ ಮಾಡಿಕೊಟ್ಟಿದ್ದರು.

## ೧೫. ಪ್ಯಾಶ್ಚರ್ ಮಹೋತ್ಸವ

ಲೂಯಿ ಪ್ಯಾಶ್ಚರ್‌ನ ಎಪ್ಪತ್ತನೆಯ ಹುಟ್ಟುಹಬ್ಬ ಫ್ರಾನ್ಸ್‌ನಾದ್ಯಂತ 1892 ಡಿಸೆಂಬರ್ ತಿಂಗಳಲ್ಲಿ ಜರುಗುವುದರಲ್ಲಿತ್ತು. ಹಲವು ಸಂಶೋಧನೆಗಳಿಂದ ಮಾನವ ಕುಲಕ್ಕೆ ಅವನಿಂದಾದ ಉಪಕಾರ ಸ್ಮರಣೆ ಅದಾಗಿತ್ತು. ಜೋಸೆಫ್ ಲಿಸ್ಟರ್‌ಗಂತೂ ಪ್ಯಾಶ್ಚರ್‌ನ ಮೂಲಭೂತ ಸಂಶೋಧನೆಗಳಿಂದಾದ ಉಪಕಾರ ಅಷ್ಟಿಷ್ಟಲ್ಲ. ವಾತಾವರಣದಲ್ಲಿ ಸೂಕ್ಷ್ಮ ಜೀವಾಣುಗಳಿರಬಹುದೆಂಬ ಕಲ್ಪನೆಯ ಮೂಲವೇ ಪ್ಯಾಶ್ಚರ್ ಆಗಿದ್ದ; ಅದರ ತಳಹದಿಯ ಮೇಲೆಯೇ ಲಿಸ್ಟರ್ ತನ್ನ ಆಂಟಿಸೆಪ್ಟಿಕ್ ನಿಯಮಗಳನ್ನು ಯಶಸ್ವಿಯಾಗಿ ರೂಪಿಸಲು ಸಾಧ್ಯವಾದದ್ದು. ತನ್ನ ಹಲವಾರು ಕಾಗದ ಪತ್ರಗಳಲ್ಲಿ ಲಿಸ್ಟರ್ ಆ ಬಗೆಗೆ ತನ್ನ ಕೃತಜ್ಞತೆಗಳನ್ನು ಸೂಚಿಸುತ್ತಿದ್ದನಲ್ಲದೇ, ಪ್ಯಾಶ್ಚರ್ ಬಗೆಗೆ ಅಪಾರ ಗೌರವಾದರಗಳನ್ನಿರಿಸಿಕೊಂಡಿದ್ದ. ಆದುದರಿಂದ ತನ್ನ ಆರಾಧ್ಯ ದೈವವೇ ಆಗಿದ್ದ ಪ್ಯಾಶ್ಚರ್‌ನ ಎಪ್ಪತ್ತನೆಯ ಹುಟ್ಟು ಹಬ್ಬದಲ್ಲಿ ಭಾಗವಹಿಸುವುದು ಅವನ ಆದ್ಯ ಕರ್ತವ್ಯವೆಂದು ಲಿಸ್ಟರ್ ಅಲ್ಲಿಗೆ ಹೋಗಿದ್ದ. ಲಂಡನ್ ಮತ್ತು ಎಡಿನ್‌ಬರೋ ರಾಯಲ್ ಸೊಸೈಟಿಗಳು ಲಿಸ್ಟರ್‌ನನ್ನು ತಮ್ಮ ಗೌರವಾನ್ವಿತ ಪ್ರತಿನಿಧಿಯಾಗಿಯೂ ಕಳುಹಿಸಿ ಕೊಟ್ಟಿದ್ದರು.

ಸಾರ್ಬನ್ (SORBONNE) ನಗರದಲ್ಲಿ ಜರುಗಿದ ಮುಖ್ಯ ಸಮಾರಂಭಕ್ಕೆ ಪ್ರಪಂಚದ ಮೂಲೆ ಮೂಲೆಗಳಿಂದ ವೈದ್ಯರು, ವಿಜ್ಞಾನಿಗಳು, ರಾಜಕಾರಣಿಗಳು, ಸಮಾಜ ಸುಧಾರಕರು ಆಗಮಿಸಿದ್ದರು. ವೃದ್ಧಾಪ್ಯ ಮತ್ತು ಪಾರ್ಶ್ವವಾಯು ಪೀಡಿತನೂ ಆದ ಪ್ಯಾಶ್ಚರ್ ಎದ್ದು ನಿಂತು ನಡೆಯುವ ಸ್ಥಿತಿಯಲ್ಲಿರಲಿಲ್ಲ. ಲಿಸ್ಟರ್ ತಾನೇ ಮುಂದಾಗಿ ಫ್ರಾನ್ಸಿನ ಅಧ್ಯಕ್ಷರ ಜತೆ ಅವನನ್ನು ಎತ್ತಿಕೊಂಡು ಹೋಗಿ ವೇದಿಕೆಯ ಮೇಲೆ ಕುಳ್ಳಿರಿಸಿದರು. ಲಿಸ್ಟರ್ ತನ್ನ ಸರದಿ ಬಂದಾಗ ಫ್ರೆಂಚ್ ಭಾಷೆಯಲ್ಲೇ ಮಾತಾಡಿ ಬ್ರಿಟಿಷ್ ಜನತೆಯ ಮತ್ತು ತನ್ನ ವೈಯಕ್ತಿಕ ಅಭಿನಂದನೆಗಳನ್ನು ಸಲ್ಲಿಸಿದ. ಶತಶತಮಾನಗಳಿಂದ ಸೋಂಕು ರೋಗಗಳಿಂದ ನರಳಿ ಸಾಯುತ್ತಿದ್ದ ಅಪಾರ ಜನಸ್ತೋಮವನ್ನು ಪ್ಯಾಶ್ಚರ್ ಹೇಗೆ ಅವುಗಳ ರಹಸ್ಯದ ಮುಸುಕನ್ನು ತೆಗೆದು ಉಪಕಾರ

ಮಾಡಿದನೆಂಬುದನ್ನು ಸ್ಮರಿಸಿ ಇಡೀ ಮಾನವ ಜನಾಂಗ ಅವನಿಗೆ ಕೃತಜ್ಞನಾಗಿರಬೇಕೆಂದು ಹೇಳಿದಾಗ, ಅಪಾರ ಜನಸ್ತೋಮ ಹರ್ಷೋದ್ಗಾರ ಮಾಡಿತು. ವೈದ್ಯ ವಿಜ್ಞಾನ ಅದರಲ್ಲೂ ಶಸ್ತ್ರ ಚಿಕಿತ್ಸಾ ಪದ್ಧತಿಗಳಿಗೆ ಪ್ಯಾಶ್ಚರ್ ನಿರೂಪಿಸಿದ ಸೂಕ್ಷ್ಮ ಜೀವಾಣುಗಳ ಇರುವಿಕೆಯ ತತ್ವದಿಂದ ಅದೆಷ್ಟು ಉಪಕಾರವಾಯಿತೆಂಬುದನ್ನು ವಿವರಿಸಿದ. ಅವನ ತತ್ವಗಳ ಮುಂದುವರಿದ ಆಚರಣೆಯಿಂದ ಶಸ್ತ್ರಚಿಕಿತ್ಸಾ ವಿಧಾನ ಚೇತರಿಸಿಕೊಂಡು ಮುಂದುವರಿಯುತ್ತಿರುವುದಕ್ಕೆ ತಾವೆಲ್ಲಾ ಚಿರಋಣಿಗಳಾಗಿರುವುದಾಗಿ ಹೇಳಿದ. ಭಾಷಣದ ಕೊನೆಯಲ್ಲಿ ಲಿಸ್ಟರ್ ಮತ್ತೆ ವೇದಿಕೆಯನ್ನೇರಿ ಪ್ಯಾಶ್ಚರ್‌ರನ್ನು ಆಲಂಗಿಸಿ, ನಮಸ್ಕರಿಸಿದ. ಮಾನವ ಕುಲ ಶ್ರೇಷ್ಠರಿಬ್ಬರ ಅಂದಿನ ಮಿಲನ ವಿಜ್ಞಾನದ ಏಕತೆಯ ಕುರುಹು ಆಗಿತ್ತು. ಆ ದಿನ ಪ್ಯಾಶ್ಚರ್ ನೀಡಿದ ಸಂದೇಶ "ವಿಜ್ಞಾನ ಮತ್ತು ಶಾಂತಿ, ಅಜ್ಞಾನ ಮತ್ತು ಯುದ್ಧಗಳ ಮೇಲೆ ಅಂತಿಮ ಜಯಗಳಿಸುತ್ತವೆಂಬ ದೃಢ ನಂಬಿಕೆ ನನಗಿದೆ, ರಾಷ್ಟ್ರ-ರಾಷ್ಟ್ರಗಳು ಎಲ್ಲರ ಉದ್ಧಾರಕ್ಕಾಗಿ ಸಹಕರಿಸಿ ಒಂದಾಗಲೆಂದು ಹಾರೈಸುತ್ತೇನೆ, ರೋಗ ರುಜಿನಗಳಿಂದ ನರಳುವ ಜನತೆಯ ಉದ್ಧಾರಕ್ಕಾಗಿ ಶ್ರಮ ಪಡುವವರಿಗೆ ಭವಿಷ್ಯದಲ್ಲಿ ಒಳ್ಳೆಯ ಸ್ಥಾನಮಾನ ದೊರೆಯುತ್ತದೆಂಬುದು ನನ್ನ ನಂಬಿಕೆ" ಅವರಿಬ್ಬರ ಕಾರ್ಯ ಮತ್ತು ಸಾಧನೆಗಳ ಪ್ರತೀಕದಂತಿತ್ತು.

## ೧೫.೧ ಅಗ್ನೀಸ್‌ಳ ಅವಸಾನ

ವರ್ಷವಿಡೀ ಬಿಡುವಿಲ್ಲದ ಕಾರ್ಯಕ್ರಮಗಳ ನಡುವೆಯೂ ಪ್ರತಿವರ್ಷ ಕೆಲವು ದಿನಗಳ ವಿಶ್ರಾಂತಿ ಮತ್ತು ವಿಹಾರಗಳಿಗೆ ಸಮಯ ಒದಗಿಸಿಕೊಳ್ಳುವುದು ಲಿಸ್ಟರ್ ದಂಪತಿಗಳು ತಪ್ಪದೇ ಆಚರಿಸುವ ಪದ್ಧತಿಯಾಗಿತ್ತು. ಮದುವೆಯಾದ ಹೊಸದರಲ್ಲಿ ಅವರಿಬ್ಬರೂ ಯುರೋಪಿನ ಹಲವು ವೈದ್ಯಕೀಯ ಕೇಂದ್ರಗಳಿಗೆ ಭೇಟಿ ನೀಡುತ್ತಾ ಮಧುಚಂದ್ರಯಾನ ಮಾಡಿದ್ದರು. ನಂತರದ ವರ್ಷಗಳಲ್ಲಿ ಯುರೋಪಿನ ಹೆಸರಾಂತ ವಿಶ್ರಾಂತಿ ಧಾಮಗಳಿರುವ ಇಟಲಿ, ಸ್ಪೈಯಿನ್, ಸ್ವಿಟ್ಸರ್‌ಲ್ಯಾಂಡ್‌ಗಳಲ್ಲಿ ವರ್ಷದ ಕೆಲವು ದಿನಗಳು ಹಾಯಾಗಿ ಇದ್ದು ಬರುತ್ತಿದ್ದರು. ಇಂಗ್ಲೆಂಡಿನಲ್ಲಿ ಪ್ರಾಣಿಗಳ ಮೇಲೆ ಪ್ರಾಯೋಗಿಕ ಪರೀಕ್ಷೆಗಳನ್ನು

ನಡೆಸುವುದಕ್ಕೆ ತಡೆಯೊಡ್ಡಿದ ನಂತರ ಅಂತಹ ಕೆಲವು ಪರೀಕ್ಷೆಗಳನ್ನು ಲಿಸ್ಟರ್ ಯುರೋಪಿನಲ್ಲಿರುತ್ತಿದ್ದ ಸಮಯದಲ್ಲಿ ಕೈಗೊಳ್ಳುತ್ತಿದ್ದನಂತೆ. ಇಂತಹ ಕಟ್ಟಕಡೆಯ ವಿಹಾರ 1893ರಲ್ಲಿ ದುಃಖಾಂತವಾಗಿ ಜರುಗಿತು. ಇಟಲಿಯ ಹೆಸರಾಂತ ನದೀ ತೀರದ ವಿಶ್ರಾಂತಿ ಧಾಮವಿರುವ ರಾಪಲ್ಲೋ ಎಂಬಲ್ಲಿಗೆ ಆ ವರ್ಷದ ವಸಂತ ಋತುವಿನ ಸಮಯಕ್ಕೆ ಲಿಸ್ಟರ್ ದಂಪತಿಗಳು ತೆರಳಿದ್ದರು. ನಾಲ್ಕಾರು ದಿನಗಳು ಹಾಯಾಗಿ ಕಳೆದ ನಂತರ ಆಗ್ನೀಸ್‌ಳಿಗೆ ಹಠಾತ್ತಾಗಿ ಜ್ವರ, ಕೆಮ್ಮು ಶುರುವಾಯಿತು. ಅದು ನ್ಯೂಮೋನಿಯಾ ಕಾಯಿಲೆಯಾಗಿ ಪರಿವರ್ತನೆಯಾಯಿತು. ಯಾವುದೇ ಚಿಕಿತ್ಸೆಗೂ ಮಣಿಯದೆ, ನಾಲ್ಕೇ ದಿನಗಳಲ್ಲಿ ಲಿಸ್ಟರ್‌ನ ಜೀವನ ಸಂಗಾತಿ ಅಸುನೀಗಿದಳು. ಜೀವಮಾನವೆಲ್ಲಾ ತನ್ನ ಪತಿಯ ಸೇವೆ ಮತ್ತು ಅವನ ಒಳಿತಿಗೆ ಮೀಸಲಾಗಿಟ್ಟಿದ್ದ ಆಗ್ನೀಸ್‌ಳ ಅಗಲಿಕೆ ಲಿಸ್ಟರ್‌ನನ್ನು ಅಪರಿಮಿತ ಶೋಕದಲ್ಲಿ ಮುಳುಗಿಸಿತು. ಮಕ್ಕಳನ್ನು ಪಡೆಯದಿದ್ದರೂ ಅವರಿಬ್ಬರೂ ಒಬ್ಬರನ್ನೊಬ್ಬರು ಎಡೆಬಿಡದೆ ಸ್ನೇಹ ಜೀವನ ನಡೆಸಿದ್ದರು. ಲಿಸ್ಟರ್‌ಗೆ ಈಗ ಒಂಟಿ ಜೀವನದ ಕಾರ್ಗತ್ತಲು ಮುಸುಕಿದಂತಾಯಿತು. ತಮ್ಮ 37 ವರ್ಷಗಳ ದಾಂಪತ್ಯ ಜೀವನದಲ್ಲಿ ಆಗ್ನೀಸ್ ತನ್ನೆಲ್ಲಾ ವೈಯಕ್ತಿಕ ಆಸೆ, ಆಕಾಂಕ್ಷೆಗಳನ್ನೆಲ್ಲಾ ಬದಿಗೊತ್ತಿ ಪತಿಯ ಕೆಲಸ-ಕಾರ್ಯ, ಸಂಶೋಧನೆ, ಸುಖ ದುಃಖಗಳಲ್ಲಿ ತಲ್ಲೀನಳಾಗಿ ಬಿಟ್ಟಿದ್ದಳು. ಲಿಸ್ಟರ್ ಗಳಿಸಿದ್ದ ಯಶಸ್ಸಿಗೆ ಆಕೆಯ ಕೊಡುಗೆಯೇನೂ ಕಡಿಮೆಯದ್ದಾಗಿರಲಿಲ್ಲ. ಪತಿಯ ಪತ್ರ ವ್ಯವಹಾರಗಳ ಜವಾಬ್ದಾರಿ ಕೈಬರಹದಂತೆಯೇ ರೂಢಿಸಿಕೊಂಡು ಅವನ ಪರವಾಗಿ ತಾನೇ ಸಹಿ ಹಾಕಿ ಕಾಗದಗಳನ್ನು ಬರೆಯುತ್ತಿದ್ದಳಂತೆ ! ಲಿಸ್ಟರ್ ಮಾಡಬೇಕಾದ ಭಾಷಣಗಳ ಪ್ರತಿಗಳನ್ನೂ ತಯಾರುಮಾಡುತ್ತಿದ್ದಳು. ಶಸ್ತ್ರ ಚಿಕಿತ್ಸೆಗೆ ಬಳಸುತ್ತಿದ್ದ ಸಲಕರಣೆಗಳ ಉಸ್ತುವಾರಿ ಕೂಡಾ ಅವಳದ್ದೇ ಆಗಿರುತ್ತಿತ್ತಂತೆ. ಲಿಸ್ಟರ್ ಜರುಗಿಸುತ್ತಿದ್ದ ಸಂಶೋಧನೆಗಳ ಹಿಂದಿನ ತತ್ವಗಳನ್ನು ಅರ್ಥಮಾಡಿಕೊಂಡು ಅವುಗಳಲ್ಲೂ ಸಕ್ರಿಯವಾಗಿ ಭಾಗವಹಿಸಿ ಅವನ ಶ್ರಮವನ್ನು ಆದಷ್ಟು ಕಡಿಮೆ ಮಾಡಲು ಪ್ರಯತ್ನಿಸುತ್ತಿದ್ದಳು. ಜೊತೆಗೆ ನಿತ್ಯದ ಗೃಹಕೃತ್ಯಗಳನ್ನು ಯಶಸ್ವಿಯಾಗಿ ಜರುಗಿಸಿ ಪತಿಯನ್ನು ಸಂತುಷ್ಟಿಗೊಳಿಸುತ್ತಿದ್ದಳು. ಸ್ನೇಹಪರ ಸಾಮಾಜಿಕ ಜೀವಿಯಾಗಿದ್ದ ಲಿಸ್ಟರ್‌ನ ಮನೆಯಲ್ಲಿ ಆಗಾಗ್ಗೆ ಸಂತೋಷ ಕೂಟಗಳಾಗುತ್ತಲೇ

ಇದ್ದವು. ಅವುಗಳನ್ನೆಲ್ಲಾ ತೃಪ್ತಿಕರವಾಗಿ ನಿಭಾಯಿಸಿ ಶ್ರೇಷ್ಠ ಅತಿಥೇಯಳೂ ಎನಿಸಿಕೊಂಡಿದ್ದಳು. ಆಕೆಯ ಅಗಲಿಕೆ ಇಳೀ ವಯಸ್ಸಿನಲ್ಲಿದ್ದ ಲಿಸ್ಟರ್‌ಗೆ ಭರಿಸಲಾರದ ವ್ಯಥೆಯುಂಟುಮಾಡಿ ಹೋಯಿತು. ಮುಂದೆ ಲಿಸ್ಟರ್ ಮನೆಯ ಗೃಹ ಕೃತ್ಯಗಳನ್ನು ಅತ್ತಿಗೆ (ಆಗ್ನೇಸ್‌ಳ ಸಹೋದರಿ) ಲೂಸೀ ಸ್ಯೈಮ್ ನೋಡಿಕೊಳ್ಳುವ ಏರ್ಪಾಡಾಯಿತು.

# ೧೬ ಸಾರ್ವಜನಿಕ ಸೇವೆ / ಗೌರವ ಸನ್ಮಾನಗಳು

ಜೋಸೆಫ್ ಲಿಸ್ಟರ್, ಲಂಡನ್ನಿನ ಕಿಂಗ್ಸ್ ಕಾಲೇಜಿನ ಹುದ್ದೆಯಿಂದ ನಿವೃತ್ತನಾದ ಮೇಲೂ ಖಾಸಗಿಯಾಗಿ ವೃತ್ತಿಯಲ್ಲಿ ಪುರಸೊತ್ತಿರದಂತೆ ಕೆಲಸದಲ್ಲಿ ತೊಡಗಿರುತ್ತಿದ್ದ. ಜೊತೆಗೆ ಆ ಕಾಲದಲ್ಲಿ ಅತ್ಯಂತ ಗೌರವಾನ್ವಿತ ಸಾರ್ವಜನಿಕ ವ್ಯಕ್ತಿಯಾಗಿದ್ದರಿಂದ ಹಲವು ಸಾಮಾಜಿಕ ಕೆಲಸ ಕಾರ್ಯಗಳ ಜವಾಬ್ದಾರಿ ಅವನನ್ನರಸಿ ಬರುತ್ತಿದ್ದವು. ಅವನು ನಿವೃತ್ತಿಗೊಳ್ಳುತ್ತಿದ್ದಂತೆಯೇ ರಾಯಲ್ ಸೊಸೈಟಿಯ ವಿದೇಶಾಂಗ ಖಾತೆ ಕಾರ್ಯದರ್ಶಿಯ ಹುದ್ದೆಗೆ ನೇಮಕವಾದನು. ಲಿಸ್ಟರ್‌ಗಿದ್ದ ಅಂತರರಾಷ್ಟ್ರೀಯ ಖ್ಯಾತಿ ಮತ್ತು ಬಹು ಭಾಷಾ ಪ್ರಾವೀಣ್ಯತೆ ಆ ಕೆಲಸಕ್ಕೆ ಹೇಳಿ ಮಾಡಿಸಿದಂತಿತ್ತು. ಸದಾ ವೈಜ್ಞಾನಿಕ ವಿಷಯಗಳನ್ನು ಮೈಗೂಡಿಸಿಕೊಂಡಿರುತ್ತಿದ್ದ ಲಿಸ್ಟರ್ ಈ ಕೆಲಸವನ್ನು ಹೊಸ ಹುರುಪಿನಿಂದ ನಿರ್ವಹಿಸಿದ. ಮುಂದೆ 1895ರಲ್ಲಿ ರಾಯಲ್ ಸೊಸೈಟಿಯ ಅಧ್ಯಕ್ಷನಾಗಿ ಆಯ್ಕೆಯಾಗುವವರೆಗೂ ಆ ಕೆಲಸವನ್ನು ಅತ್ಯಂತ ಸಮರ್ಪಕವಾಗಿ ನಿರ್ವಹಿಸಿದ ಖ್ಯಾತಿ ಲಿಸ್ಟರ್‌ರದು. ಲಿಸ್ಟರ್ ಅತ್ಯಂತ ಕಿರಿಯ ವಯಸ್ಸು ಅನ್ನಬಹುದಾದ 33ರಲ್ಲೇ ರಾಯಲ್ ಸೊಸೈಟಿಯ ಫೆಲೋ ಆಗಿ ಆಯ್ಕೆ ಆಗಿದ್ದು (1860). ಅದಕ್ಕೂ ಮೊದಲು ಅವನ ತಂದೆಯೂ ಫೆಲೋ ಆಗಿದ್ದು ಲಿಸ್ಟರ್ ಕುಟುಂಬದವರ ಹಿರಿಮೆಗೆ ಕಾರಣವಾಗಿತ್ತು. ಜೋಸೆಫ್ ಲಿಸ್ಟರ್ 'ಫೆಲೋ' ಆಗುವ ಸಮಯದಲ್ಲಿ ಅವನ ಸಂಶೋಧನೆಯಾದ ಆಂಟಿಸೆಪ್ಟಿಕ್ ನಿಯಮಗಳು ಇನ್ನೂ ರೂಪುಗೊಂಡಿರಲಿಲ್ಲ. ಯುವ ವೈದ್ಯ ಜೋಸೆಫ್ ಲಿಸ್ಟರ್ ಹಲವು ಬಗೆಯ ಸಂಶೋಧನೆಗಳಲ್ಲಿ ತೊಡಗಿರುತ್ತಿದ್ದು, ಅದರಿಂದ ಪ್ರಕಟವಾದ ಪ್ರತಿಭೆಯನ್ನೆ ರಾಯಲ್ ಸೊಸೈಟಿ ಗುರುತಿಸಿ ಆಯ್ಕೆ ಮಾಡಿತ್ತು.

ಮುಂದಿನ ವರ್ಷ (1896) ಲಿಸ್ಟರ್ ಪ್ರತಿಷ್ಠಿತ ಬ್ರಿಟಿಷ್ ಅಸೋಷಿಯೇಷನ್‌ನ ಅಧ್ಯಕ್ಷನಾಗಿ ಚುನಾಯಿತನಾದನು. ಲಿವರ್‌ಪೂಲ್‌ನಗರದಲ್ಲಿ ಜರುಗಿದ ಅದರ ಸಮಾವೇಶದಲ್ಲಿ ಲಿಸ್ಟರ್ ಮಾಡಿದ ಭಾಷಣ ಅತ್ಯಂತ ಶ್ರೇಷ್ಠ ಮಟ್ಟದ್ದೆನ್ನಲಾಗಿದೆ. ಹೃದಯ ವೈಶಾಲ್ಯ ಮತ್ತು ಬಿಚ್ಚು ಮನಸ್ಸಿಗೆ ಹೆಸರಾದ ಲಿಸ್ಟರ್ ಆ ಸಮಯದಲ್ಲಿ ಬೆಳಕಿಗೆ ಬಂದ ಹಲವು ಸಂಶೋಧನೆಗಳನ್ನು ಮೊದಲು ಕೊಂಡಾಡಿದನು. "ವಿಜ್ಞಾನ ಮತ್ತು ಕಾಯಿಲೆಗಳನ್ನು ವಾಸಿಮಾಡುವ ವೈದ್ಯ ವೃತ್ತಿಗಳೆರಡರ ನಡುವೆ ಇರುವ ಅವಿನಾ ಸಂಬಂಧ" ಅವನ ಭಾಷಣದ ವಿಷಯವಾಗಿತ್ತು. ಆಗ ತಾನೇ

ಆವಿಷ್ಕಾರವಾದ ರಾಂಟಜನ್ ಕಿರಣಗಳು (1895, ಎಕ್ಸರೇ) ಲೂಯಿ ಪ್ಯಾಶ್ಚರ್ ರೇಬಸ್ ರೋಗದ ಮೇಲೆ ಗಳಿಸಿದ ವಿಜಯ ಹಾಗೂ ರಾಬರ್ಟ್ ಕಾಖ್, ಮೆಟ್ನಿಕಾಫ್‌ರಂಥವರು ಮಾಡಿ ತೋರಿಸುತ್ತಿರುವ ಸಂಶೋಧನೆಗಳ ಮಹತ್ವವನ್ನು ವಿವರಿಸಿದ. ಕೊನೆಯದಾಗಿ ತಾನು ನಿರೂಪಿಸಿದ ಆಂಟಿಸೆಪ್ಟಿಕ್ ನಿಯಮಗಳಿಂದಾದ ಉಪಕಾರಗಳ ಬಗೆಗೆ ಅತ್ಯಂತ ವಿನಮ್ರ ಭಾವನೆಯಿಂದ ನಿವೇದಿಸಿಕೊಂಡನಂತೆ. ಆ ತನಕ ಅವನ ತತ್ವಗಳು ಮತ್ತು ಅದರಿಂದಾದ ಪರಿಣಾಮಗಳ ಬಗೆಗೆ ಅರಿತುಕೊಳ್ಳದಿದ್ದವರು, ಅವನೊಬ್ಬ ಮನುಕುಲದ ಮಹಾನ್ ರಕ್ಷಕನೆಂಬುದನ್ನು ಭಾವಿಸಿಕೊಳ್ಳಲಾರದಷ್ಟು ವಿನೀತ ಭಾವನೆ ಅವನಲ್ಲಿತ್ತೆಂದು ಪತ್ರಿಕಾ ವರದಿಗಳಾಗಿದ್ದವು.

ವಿಕ್ಟೋರಿಯಾ ಮಹಾರಾಣಿಯು ಅರವತ್ತು ವರ್ಷಗಳು ಚಕ್ರವರ್ತಿನಿಯಾದ ಸಂದರ್ಭದ ಉತ್ಸವಗಳು 1897ರಲ್ಲಿ ಜರುಗುವುದಾಗಿತ್ತು, ಹೊಸ ವರ್ಷದ ಗೌರವ ಸನ್ನದುಗಳಲ್ಲಿ ಜೋಸೆಫ್ ಲಿಸ್ಟರ್‌ಗೆ ''ಲಾರ್ಡ್'' ಬಿರುದು (LORD, BARON, PEER) ದಯಪಾಲಿಸಲಾಗಿತ್ತು. ಬ್ರಿಟಿಷ್ ಚಕ್ರವರ್ತಿನಿ ನೀಡಬಹುದಾದ ಅತ್ಯಂತ ಶ್ರೇಷ್ಠ ಬಿರುದು, ವೈದ್ಯರೊಬ್ಬರಿಗೆ ದೊರೆತದ್ದು ಅದೇ ಮೊದಲ ಸಲ; ಇಡೀ ವೈದ್ಯ ಸಮೂಹವೇ ಅದರಿಂದ ಹರ್ಷಗೊಂಡಿತು. ನಾಡಿನ ಎಲ್ಲಾ ಕಡೆಗಳಿಂದ ಶುಭಾಶಯಗಳು ಬರಲಾರಂಭಿಸಿದವು. ಅವುಗಳಲ್ಲಿ ಲಿಸ್ಟರ್‌ನ ಇಡೀ ವೃತ್ತಿ ಜೀವನದ ಅವಧಿಯಲ್ಲಿ ಅವನ ಸಹಾಯಕರಾಗಿ, ವಿದ್ಯಾರ್ಥಿಗಳಾಗಿ, ತರಬೇತಿ ಪಡೆದವರಾಗಿ, ಸಹೋದ್ಯೋಗಿಗಳಾಗಿ, ಕೆಲಸ ಮಾಡಿದ ಸುಮಾರು 130 ಜನ ವೈದ್ಯರು ಒಂದೆಡೆ ಸೇರಿ ಮಹಾನ್ ಔತಣ ಕೂಟವನ್ನೇರ್ಪಡಿಸಿ ಸತ್ಕರಿಸಿದ್ದು ಅವನಿಗೆ ಅತ್ಯಂತ ಹೆಮ್ಮೆಯ ವಿಷಯವಾಯಿತು. ಅವರೆಲ್ಲಾ ತನ್ನೊಡನೆ ವಿವಿಧ ಹಂತಗಳಲ್ಲಿ ಸಹಕರಿಸಿ, ಆಂಟಿಸೆಪ್ಟಿಕ್ ನಿಯಮಗಳು ಯಶಸ್ವಿಯಾಗಿ ಜಾರಿಗೆ ತರಲು ಶ್ರಮಿಸಿದ ನೆನಪು ಮರುಕಳಿಸಿದಂತಾಯಿತು. ಅವರಲ್ಲಿ ಬಹಳಷ್ಟು ಮಂದಿ ತಮ್ಮ ತಮ್ಮ ವೃತ್ತಿಯಲ್ಲಿ ಹೆಸರುಗಳಿಸಿ ಮಾನ್ಯತೆ ಪಡೆದವರಾಗಿದ್ದರು.

ಅದೇ ವರ್ಷದ ಶರತ್ಕಾಲದಲ್ಲಿ ಲಿಸ್ಟರ್‌ಗೆ ಕೆನಾಡಾಕ್ಕೆ ಭೇಟಿ ನೀಡುವ ಅವಕಾಶ ಲಭಿಸಿತು. ಟೋರಾಂಟೋದಲ್ಲಿ ಜರುಗಿದ ಬ್ರಿಟಿಷ್ ಅಸೋಷಿಯೇಷನ್‌ನ ಸಮಾವೇಶ ಮತ್ತು ಮಾಂಟ್ರೀಯಾಲ್‌ನಲ್ಲಿ ನಡೆದ ಬ್ರಿಟಿಷ್ ಮೆಡಿಕಲ್ ಅಸೋಷಿಯೇಷನ್ ಸಮಾವೇಶಗಳಿಗೆ ಗೌರವದ ಅತಿಥಿಯಾಗಿ ಆಹ್ವಾನಿಸಲ್ಪಟ್ಟಿದ್ದ. ಲಿಸ್ಟರ್ ಕ್ವೇಕರ್ ಪಂಗಡಕ್ಕೆ ಸೇರಿದ ವಿಷಯ ಆಗೊಂದು

ಸಾರಿ ಸ್ವಾರಸ್ಯಕರವಾಗಿ ಪ್ರಸ್ತಾಪಿಸಲ್ಪಟ್ಟಿತು. ಸರ್ ಮೈಕೇಲ್ ಫಾಸ್ಟರ್ (ಖ್ಯಾತ ಶರೀರಕ್ರಿಯಾ ಶಾಸ್ತ್ರಜ್ಞರು) ತಮ್ಮ ಭಾಷಣವೊಂದರಲ್ಲಿ ''ಎಳೆಯ ವಯಸ್ಸಿನಲ್ಲಿ ಲಾರ್ಡ್ ಲಿಸ್ಟರ್ ಕ್ವೇಕರ್ ಪಂಗಡಕ್ಕೆ ಸೇರಿದವರಾಗಿದ್ದರು. ಅದರ ಸದಸ್ಯರು ಎಲ್ಲಾ ಮಾನವರೂ ಪರಸ್ಪರ ಸ್ನೇಹಿತರೆಂದು ಪರಿಗಣಿಸಿದವರು; ಪ್ರಸ್ತುತ ಲಿಸ್ಟರ್ ಇಡೀ ಮಾನವ ಕುಲಕ್ಕೆ ಮಾಡಿದ ಅಳತೆಗೆ ಮೀರಿದ ಉಪಕಾರ ಮತ್ತು ಸೇವೆಗಳಿಂದ ಪ್ರಪಂಚದ ಮಾನವರೆಲ್ಲಾ ಅವರನ್ನು ತಮ್ಮ ಸ್ನೇಹಿತ ಎಂದೇ ಪರಿಗಣಿಸುತ್ತಾರೆ.'' ಜೋಸೆಫ್ ಲಿಸ್ಟರ್‌ರ ಸಾಧನೆಗಳಿಗೆ ಇದಕ್ಕಿಂತ ಹೆಚ್ಚಿನ ಪ್ರಶಂಸೆಗಳಿರಲಾರವಲ್ಲವೆ?

ಲಿಸ್ಟರ್ ಮೊಟ್ಟ ಮೊದಲು ತನ್ನ ವೃತ್ತಿ ಜೀವನ ಆರಂಭಿಸಿದ ಎಡಿನ್ ಬರೋ ನಗರದವರು 1898ರ ಬೇಸಿಗೆಯಲ್ಲಿ ಆ ನಗರದ ಅತ್ಯುನ್ನತ ಗೌರವ FREEDOM OF TH CITY OF EDINBURGH ವನ್ನು ನೀಡಿದರು. ಆ ಸಮಯದಲ್ಲಿ ಮಾಡಿದ ಭಾಷಣದಲ್ಲಿ ಲಿಸ್ಟರ್ ಅವರಿತ್ತ ಗೌರವ ತಾನು ಪ್ರೀತಿಯಿಂದ ಮೆಚ್ಚಿ ಸ್ವೀಕರಿಸುವುದಾದರೂ, ಮಾನವನ ಕಷ್ಟ ಕಾರ್ಪಣ್ಯಗಳನ್ನು ಹೋಗಲಾಡಿಸುವಲ್ಲಿ ತನಗೆ ಕಿಂಚಿತ್ ಪಾತ್ರ ದೊರೆಯುವುದೇ ಹೆಚ್ಚಿನ ಗೌರವವೆಂದು ಭಾವಿಸುವುದಾಗಿ ಉತ್ತರಿಸಿದನಂತೆ.

ಲಿಸ್ಟರ್ ಈಗ ವೃತ್ತಿಯಿಂದ ನಿವೃತ್ತಿ ಪಡೆದಿದ್ದರೂ, ಹಲವಾರು ಸಾರ್ವಜನಿಕ ಸಮಾರಂಭಗಳು ಅವನಿಲ್ಲದೆ ಜರುಗಲಾರವೋ ಎನ್ನುವಂತಾಗಿತ್ತು. ಲಂಡನ್ ನಗರದಲ್ಲಿ ವೈಜ್ಞಾನಿಕ ಅಥವಾ ವೈದ್ಯಕೀಯ ವಿಷಯಗಳಲ್ಲಿ ಸಮಾವೇಶಗಳೇರ್ಪಟ್ಟರೆ, ಲಿಸ್ಟರ್ ಅಧ್ಯಕ್ಷನಾಗಿಯೋ, ಮುಖ್ಯ ಅತಿಥಿಯಾಗಿಯೋ ಭಾಗವಹಿಸುವುದು ಅನಿವಾರ್ಯವಾಗಿ ಬಿಡುತ್ತಿತ್ತು. ಬರಬರುತ್ತಾ ಅವುಗಳಿಂದಲೇ ಬಹಳ ಶ್ರಮವಾಗುತ್ತಿತ್ತು. ಈ ಶತಮಾನದ ಆದಿಯ ಕೆಲವು ದಿನಗಳನ್ನು (1901-1902) ದಕ್ಷಿಣ ಆಫ್ರಿಕಾದ ವಿಶ್ರಾಂತಿ ಧಾಮಗಳಲ್ಲಿ ಕಳೆದ. ಆ ಸಮಯದಲ್ಲಿ ಅವನಿಗೆ ಅವಶ್ಯಕವಾಗಿ ಬೇಕಾಗಿದ್ದ ದೈಹಿಕ ಮತ್ತು ಮಾನಸಿಕ ವಿಶ್ರಾಂತಿ ದೊರೆಯುವಂತಾಯಿತು. ಅಲ್ಲಿಂದ 1902ರ ಬೇಸಿಗೆಯಲ್ಲಿ ವಾಪಸಾದ ಕೂಡಲೇ ಅಸ್ವಸ್ಥರಾಗಿದ್ದ ದೊರೆ ಏಳನೆಯ ಎಡ್ವರ್ಡ್‌ರನ್ನು ಶುಶ್ರೂಷೆಗೆ ನೇಮಕವಾದ ವೈದ್ಯರ ತಂಡದ ನೇತೃತ್ವ ವಹಿಸಬೇಕಾಯಿತು. ಹಿಂದಿನ ವರ್ಷ ಗತಿಸಿದ ವಿಕ್ಟೋರಿಯಾ ಮಹಾರಾಣಿಯ ಉತ್ತಾರಾಧಿಕಾರಿಯಾಗಿ ಏಳನೆಯ ಎಡ್ವರ್ಡ್ ವಿದ್ಯುಕ್ತವಾಗಿ ಸಿಂಹಾಸನಾರೋಹಣಕ್ಕೆ ಸಿದ್ದತೆಗಳಾಗುತ್ತಿದ್ದವು.

ಜೂನ್ 25ಕ್ಕೆ ನಿಗದಿಯಾದ ಪಟ್ಟಾಭಿಷೇಕ ಮಹೋತ್ಸವ ಹಠಾತ್ತಾಗಿ ಮುಂದೂಡ ಬೇಕಾಯಿತು. ಬ್ರಿಟಿಷ್ ಚಕ್ರಾಧಿಪತ್ಯವೇ ದುಃಖದಿಂದ ಅಲ್ಲೋಲ ಕಲ್ಲೋಲವಾಯಿತು. ರಾಜಕುಮಾರ ಎಡ್ವರ್ಡ್ 2-3ದಿನಗಳಿಂದ ಬಲ ಕಿಬ್ಬೊಟ್ಟೆಯ ನೋವಿನಿಂದ ನರಳುತ್ತಿದ್ದರು. ರಾಜಕುಮಾರರ ಚಿಕಿತ್ಸೆಯ ಮೇಲ್ವಿಚಾರಣೆಗೆ ನೇಮಕವಾದ ವೈದ್ಯರ ತಂಡಕ್ಕೆ ಅತ್ಯಂತ ಹಿರಿಯನಾದ ಲಿಸ್ಟರ್‌ನ ಸಲಹೆ ಸೂಚನೆಗಳ ಅವಶ್ಯಕತೆ ಇತ್ತು. ಈಗ ಎಲ್ಲರಿಗೂ ಚಿರಪರಿಚಿತವಿರುವ ಅಪೆಂಡಿಸೈಟಿಸ್ (APPENDICITIS) ವ್ಯಾಧಿಯಿಂದ ಬಲ ಕಿಬ್ಬೊಟ್ಟೆಯಲ್ಲಿ ಕೀವು ಶೇಖರಣೆಯಾಗಿತ್ತು. ಅದರ ಬಗೆಗೆ ಅಷ್ಟೇನೂ ತಿಳುವಳಿಕೆ ಇರದ ಆ ಕಾಲದಲ್ಲಿ ಕೀವನ್ನು ಹೊರಗೆ ಬಿಡುವ ನಿರ್ಧಾರವೇ ಅತ್ಯಂತ ಮಹತ್ವದ ಕಾರ್ಯವೆನಿಸಿತು. ಆಗಿನ ಖ್ಯಾತ ಶಸ್ತ್ರ ವೈದ್ಯ ಸರ್ ಫ್ರಡರಿಕ್ ಟ್ರೇವ್ಸ್, ಲಿಸ್ಟರ್ ಮುಂತಾದವರ ಸಲಹೆಯಂತೆ ಬಲ ಕಿಬ್ಬೊಟ್ಟೆಯಲ್ಲಿ ಕತ್ತರಿಕೆ ಮಾಡಿ, ಮಡುಗಟ್ಟಿದ್ದ ಕೀವನ್ನು ಹೊರಬಿಟ್ಟರು. ರಾಜಕುಮಾರ ಮುಂದೆ ಹೆಚ್ಚಿನ ತೊಡಕುಗಳಿಲ್ಲದೆ ಚೇತರಿಸಿಕೊಂಡರು. ಆಗಸ್ಟ್ 9 ರಂದು ಪಟ್ಟಾಭಿಷೇಕ ಮಹೋತ್ಸವ ಸಾಂಗವಾಗಿ ನೆರವೇರಿತು. ಪಟ್ಟಾಭಿಷೇಕ ಮಹೋತ್ಸವದ ನೆನಪಿಗಾಗಿ ಹೊಸ ಗೌರವ ಪದವಿ (ORDER OF MERIT) ಆರಂಭವಾಯಿತು. ಮೊದಲ ವರ್ಷದ ಹನ್ನೆರಡು ಮಂದಿ ಗಣ್ಯ ವ್ಯಕ್ತಿಗಳಲ್ಲಿ ಲಾರ್ಡ್ ಲಿಸ್ಟರ್ ಒಬ್ಬರಾಗಿದ್ದರೆಂದರೆ ಲಿಸ್ಟರ್ ಏರಿದ ಸ್ಥಾನಮಾನಗಳ ಅರಿವಾಗಬಹುದು. ಅದು ಸಾಲದೆಂಬಂತೆ ಬ್ರಿಟನ್ನಿನ ಅತ್ಯುನ್ನತ ನ್ಯಾಯ ಮಂಡಳಿಯಾದ (PRIVY COUNCIL) ಗೂ ಲಿಸ್ಟರ್‌ನನ್ನು ನಾಮಕರಣ ಮಾಡಿದರು. ಆ ಸಂದರ್ಭದಲ್ಲಿ ಜರುಗಿದ ಸಮಾರಂಭದಲ್ಲಿ ದೊರೆ ಎಡ್ವರ್ಡ್, ಲಿಸ್ಟರ್‌ನ ಸಾಧನೆಗಳಿಂದ ವೈದ್ಯಕೀಯ ಮತ್ತು ಶಸ್ತ್ರ ಚಿಕಿತ್ಸಾ ಕ್ಷೇತ್ರಗಳಲ್ಲಾದ ಅಗಾಧ ಯಶಸ್ಸುಗಳನ್ನು ಗಮನದಲ್ಲಿಟ್ಟುಕೊಂಡು "ಲಾರ್ಡ್ ಲಿಸ್ಟರ್‌ರೇ, ತಮ್ಮ ಸಾಧನೆಗಳ ಯಸ್ಸಿನಿಂದಲೇ ನಾನಿಂದು ಜೀವಂತವಾಗಿ ಬದುಕಿರಲು ಸಾಧ್ಯವಾಗಿದೆ." ಎಂದು ಪ್ರಶಂಸಿಸಿದರು.

ಮುಂದಿನ ಕೆಲವು ವರ್ಷಗಳಲ್ಲಿ ಲಿಸ್ಟರ್ ಅಷ್ಟೇನೂ ಚುರುಕಿನ ಜೀವನ ನಡೆಸಲಾರದಷ್ಟರ ಹಂತವನ್ನು ತಲುಪಿದ್ದನೆಂದೇ ಹೇಳಬಹುದು. ಲಂಡನ್ ಹತ್ತಿರದ ಬಕ್ಸಟನ್ ಎಂಬಲ್ಲಿ ವಿಶ್ರಾಂತಿ ಜೀವನ ನಡೆಸುತ್ತಿದ್ದಾಗ (1903) ಲಿಸ್ಟರ್ ತೀವ್ರ ಅಸ್ವಸ್ಥತೆಗೊಳಗಾದ ನಂತರ ಅದರಿಂದ ಪೂರ್ಣವಾಗಿ ಚೇತರಿಸಿ ಕೊಳ್ಳಲು ಆಗಲೇ ಇಲ್ಲ. ಮುಂದಿನ ದಿನಗಳಲ್ಲಿ ಬಕ್ಸಟನ್ ಮತ್ತು ಬಾತ್

(BATH) ಎಂಬ ಊರುಗಳಲ್ಲಿ ನೆಲಸಿ ಕಾಲ ಹಾಕುತ್ತಿದ್ದ. ಲಂಡನ್ ನಗರದಲ್ಲಿ ಲಿಸ್ಟರ್ ಈ ಸಮಯದಲ್ಲಿ ಪ್ರಮುಖ ಸಾಮಾಜಿಕ ವ್ಯಕ್ತಿಯಾಗಿರದಿದ್ದರೂ, ಅವನು ಜನರ ಮನಸ್ಸಿನಿಂದ ಮರೆಯಾಗಿರಲಿಲ್ಲ. ಅವನ ಎಂಬತ್ತನೆಯ ವರ್ಷ (1907) ಸಮೀಪಿಸುತ್ತಿದ್ದಂತೆ ಅದನ್ನು ಅತ್ಯಂತ ಸ್ಮರಣೀಯ ಘಟನೆಯಾಗಿ ಆಚರಿಸಿ ಲಿಸ್ಟರ್‌ಗೆ ಗೌರವ ಸೂಚಿಸಬೇಕೆಂಬ ನಿರ್ಧಾರ, ಲಿಸ್ಟರ್ ಅಭಿಮಾನಿಗಳು ಮತ್ತು ಸ್ನೇಹಿತ ವರ್ಗಗಳವರಿಗಿತ್ತು. ಆ ಸಲುವಾಗಿ ಲಿಸ್ಟರ್ ಆ ತನಕ ಪ್ರಕಟಿಸಿದ ಲೇಖನಗಳು, ಭಾಷಣ ಮುಂತಾದವುಗಳನ್ನು ಸಂಗ್ರಹಿಸಿ ಪ್ರಕಟಿಸುವ ಯೋಜನೆಯೊಂದು ರೂಪಗೊಂಡಿತು. COLLECTED WORKS OF JOSEPH BARON LISTER ಎಂಬ ಮಹಾನ್ ಗ್ರಂಥ 1909ರಲ್ಲಿ ಪ್ರಕಟವಾಯಿತು. ಲಿಸ್ಟರ್‌ನ ಹಳೆಯ ವಿದ್ಯಾರ್ಥಿಗಳು, ಸಹಾಯಕರು ಮತ್ತು ಹಿತೈಷಿಗಳ ಸತತ ಶ್ರಮದ ಫಲ ಅದಾಗಿತ್ತು. ಎರಡು ಭಾಗಗಳಲ್ಲಿದ್ದ ಬೃಹತ್ ಸಂಪುಟಗಳನ್ನು ಎತ್ತಿ ಇಳಿಸುವುದೇ ಕಷ್ಟಕರವಾಗಿದ್ದು, ದಿನ ನಿತ್ಯದ ಅವಲೋಕನಕ್ಕೆ ಸೂಕ್ತವಾದುವಲ್ಲವೆಂಬ ಅಭಿಪ್ರಾಯವೂ ಇತ್ತು. ಜೋಸೆಫ್ ಲಿಸ್ಟರ್ ತನ್ನ ಎಳೆಯ ವಯಸ್ಸಿನಿಂದಲೂ ವೈದ್ಯಕೀಯ ಕ್ಷೇತ್ರದ ವಿವಿಧ ವಿಭಾಗಗಳಲ್ಲಿ ತೋರಿಸುತ್ತಿದ್ದ ಆಸಕ್ತಿ, ಜರುಗಿಸುತ್ತಿದ್ದ ಸಂಶೋಧನೆಗಳು, ಅದರಲ್ಲೂ ಆಂಟಿಸೆಪ್ಟಿಕ್ ತತ್ವಗಳು ಉಗಮ, ಬೆಳವಣಿಗೆ, ಪ್ರಚಾರ, ಅಳವಡಿಕೆ, ಯಶಸ್ಸು ಮುಂತಾದ ವಿಷಯಗಳ ಮೂಲ ಬರಹಗಳ ಸಂಗ್ರಹ ಅದಾಗಿತ್ತು. ಲಿಸ್ಟರ್ ತನ್ನ ಸಂಶೋಧನೆಗಳ ಬಗೆಗಾಗಲಿ, ಶಸ್ತ್ರ ಚಿಕಿತ್ಸಾ ಶಾಸ್ತ್ರದ ಬಗೆಗಾಗಲೀ ಯಾವುದೇ ಗ್ರಂಥವನ್ನು ರಚಿಸಿರಲಿಲ್ಲವಾದುದರಿಂದ ಈ ಬೃಹತ್ ಸಂಪುಟಗಳು ಮುಂದಿನ ಜನಾಂಗದವರಿಗೆ ತುಂಬಾ ಉಪಯುಕ್ತವಾಗುವುದರಲ್ಲಿ ಸಂದೇಹವಿಲ್ಲ.

ಎಂಬತ್ತನೆಯ ಜನ್ಮದಿನ 5ನೆಯ ಏಪ್ರಿಲ್ 1907 ಬ್ರಿಟನ್ ಅಲ್ಲದೆ ಪ್ರಪಂಚದ ಹಲವು ಕಡೆ ಅತ್ಯಂತ ವಿಜೃಂಭಣೆಯಿಂದ ಆಚರಣೆಯಾದ ವರದಿಗಳಾಗುತ್ತಿದ್ದವು. ಸಾವಿರಾರು ತಂತಿ ಸಂದೇಶಗಳು, ಪುಷ್ಪ ಗುಚ್ಛಗಳು ಆ ದಿನ ಪಾರ್ಕ್ ಕ್ರೆಸೆಂಟ್ ಗೃಹಕ್ಕೆ ಬರುತ್ತಲೇ ಇದ್ದವು. ಅನಾರೋಗ್ಯದ ಕಾರಣದಿಂದ ಬಹಳ ಜನ ಲಿಸ್ಟರ್‌ನನ್ನು ಭೇಟಿಮಾಡಲು ಸಾಧ್ಯವಾಗಲಿಲ್ಲ. ಆದರೆ ROYAL COLLEGE OF SURGONS ರ ನಿಯೋಗದವರಿಗೆ ಭೇಟಿಯ ಅವಕಾಶವಿತ್ತಾಗ, ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸಿದನಂತೆ. ಪ್ರಪಂಚದಾದ್ಯಂತ ಪತ್ರಿಕೆಗಳು ಲಿಸ್ಟರ್ ವೈದ್ಯಕೀಯ ಕ್ಷೇತ್ರಕ್ಕೆ ಹಾಗೂ ಪರೋಕ್ಷವಾಗಿ ಮನುಕುಲಕ್ಕೆ

ಮಾಡಿದ ಉಪಕಾರವನ್ನು ಸ್ಮರಿಸಿ ಲೇಖನ ಬರೆದಿದ್ದವು. ದಿನೇ ದಿನೇ ಬಡಕಲಾಗುತ್ತಿದ್ದು ಒಂಟಿ ಜೀವನದಿಂದ ಬೇಸರದಲ್ಲಿದ್ದ ಲಿಸ್ಟರ್‌ಗೆ ಅವೆಲ್ಲಾ ವಿಸ್ಮಯಕಾರಿಯಾಗಿ ಕಾಣಿಸಿರಬೇಕು. ತನ್ನ ತಮ್ಮನಿಗೆ ಬರೆದ ಪತ್ರದಲ್ಲಿ ತಾನು ನಿಷ್ಕ್ರಿಯನಾಗಿ, ಏನೂ ಮಾಡದೇ ಸುಮ್ಮನಿರುವ ಸಮಯದಲ್ಲಿ ಅದೆಷ್ಟು ಬದಲಾವಣೆಗಳಾಗುತ್ತಿವೆಯೆಂದು ಅಚ್ಚರಿಯನ್ನು ವ್ಯಕ್ತ ಪಡಿಸಿದ್ದನಂತೆ.

ಇನ್ನೆರಡು ತಿಂಗಳಲ್ಲಿ FREEDOM OF CITY OF LONDON ಗೌರವದ ಸನ್ಮಾನ ಜರುಗಿತು. ಅದೇ ಲಿಸ್ಟರ್‌ನ ಕಟ್ಟ ಕಡೆಯ ಸಾರ್ವಜನಿಕ ಕಾರ್ಯಕ್ರಮವೆನ್ನಬಹುದು. ಕೇವಲ ಒಂದು ನೂರು ವರ್ಷಗಳ ಹಿಂದೆ ಮೈಲಿ ಬೇನೆ ವಿರುದ್ಧ ವ್ಯಾಕ್ಸಿನೇಷನ್ ವಿಧಾನವನ್ನು ಕಂಡುಹಿಡಿದ ಎಡ್ವರ್ಡ್ ಜೆನ್ನರಗೂ ಈ ಗೌರವ ಪ್ರದಾನವಾಗಿತ್ತು.

ಮುಂದಿನ ವರ್ಷ FREEDOM OF CITY OF GLASGOW ಸಹಾ ಲಿಸ್ಟರ್‌ಗೆ ದೊರೆಯಿತು. ಬಹುಶಃ ಇಂಗ್ಲೆಂಡಿನ ಮೂರು ಪ್ರಮುಖ ನಗರಗಳ ಅಂತಹ ಗೌರವ ಲಭಿಸಿದ್ದು ಲಿಸ್ಟರ್ ಒಬ್ಬನಿಗೆ. ಅಚ್ಚರಿಯ ಸಂಗತಿಯೆಂದರೆ ಲಿಸ್ಟರ್ ಅತ್ಯಂತ ಯಶಸ್ವಿಯಾಗಿ ನಿರೂಪಿಸಿದ ಆಂಟಿಸೆಪ್ಟಿಕ್ ನಿಯಮಗಳು ಮೊಟ್ಟಮೊದಲು ಜಾರಿಗೆ ಬಂದ ಗ್ಲಾಸ್ಗೋ ನಗರದ ಗೌರವ ಕಟ್ಟಕಡೆಯದಾಗಿ ಬಂದದ್ದು. ಲಿಸ್ಟರ್ ವಯಸ್ಸಿನ ಭಾರದಿಂದ ತೊಳಲುತ್ತಿದ್ದು ಅಲ್ಲಿಗೆ ಪ್ರಯಾಣ ಮಾಡಲಾಗದಿದ್ದುದ್ದರಿಂದ, ಅವನ ಹಳೆಯ ಶಿಷ್ಯರಲ್ಲೊಬ್ಬರಾದ ಸರ್ ಹೆಕ್ಟರ್ ಕಾಮ್‌ರೂನ್ ಅದನ್ನು ಸ್ವೀಕರಿಸಿದರು.

ಜೋಸೆಫ್ ಲಿಸ್ಟರ್ ಕೊನೆಯ ದಿನಗಳಲ್ಲಿ ದೇಹ ಕ್ಷೀಣಿಸುತ್ತಿದ್ದರೂ, ಬುದ್ಧಿ ಚುರುಕಾಗಿ ಉಳಿದುಕೊಂಡಿತ್ತು. ತನ್ನ ಹಳೆಯ ಸಹೋದ್ಯೋಗಿಗಳು ಮತ್ತು ಸ್ನೇಹಿತರೊಡನೆ ಪತ್ರ ವ್ಯವಹಾರ ನಡೆಸುತ್ತಲೇ ಇದ್ದ. ಲಂಡನ್ ನಗರದ ಸದ್ದು ಗದ್ದಲ ಅವನಿಗೆ ಹಿಡಿಸುತ್ತಿರಲಿಲ್ಲ. ಆದಷ್ಟು ಅದರಿಂದ ದೂರವಿರಲು ಪ್ರಯತ್ನಿಸುತ್ತಿದ್ದನಂತೆ. ಅಂತಿಮವಾಗಿ ಇಂಗ್ಲಿಷ್ ಕಾಲುವೆಯ ಹತ್ತಿರ ಸಮುದ್ರ ತೀರದ ವಾಲ್ಮೇರ್ (ಕೆಂಟ್ ಪ್ರದೇಶ) ಎಂಬ ಚಿಕ್ಕ ಪಟ್ಟಣದಲ್ಲಿ ವಾಸಿಸತೊಡಗಿದ. ಅಲ್ಲಿಯ ಹವೆ ಸ್ವಲ್ಪ ಚೆನ್ನಾಗಿ ಹಿಡಿಸಿದಂತಿತ್ತು. ಆದರೂ ಲಂಡನ್ನಿನ ತನ್ನ ಮನೆಗೆ ವಾಪಸಾಗುವ ಹಂಬಲವಿತ್ತಂತೆ. ಆದರೆ ಆ ಆಸೆ ಈಡೇರಲಿಲ್ಲ. ಬರಬರುತ್ತಾ ದೇಹ ಕ್ಷೀಣಿಸಿ 1912ರ ಫೆಬ್ರವರಿ 10 ರಂದು ಲಿಸ್ಟರ್‌ನ ಅವಸಾನವಾಯಿತು.

ಲಾರ್ಡ್ ಲಿಸ್ಟರ್ ಗತಿಸಿದಾಗ ರಾಜ ಮನೆತನದವರ ಅಂತಿಮ ಕ್ರಿಯೆ ಮಾಡುವ ವೆಸ್ಟ್‌ಮಿನಿಸ್ಟರ್ ಅಬ್ಬೆ ಎಂಬ ಚರ್ಚ್‌ನ ಆವರಣದ ಸ್ಮಶಾನದಲ್ಲಿ ಅಂತ್ಯಕ್ರಿಯೆ ನಡೆಸುವ ಏರ್ಪಾಡಾಗಿತ್ತು. ಆದರೆ ಲಿಸ್ಟರ್, ಮೊದಲೇ ಆ ಬಗೆಗೆ ತನ್ನ ಅಭಿಪ್ರಾಯವನ್ನು ಸೂಚಿಸಿದ್ದ. ತನ್ನ ಪತ್ನಿ ಆಗ್ನೀಸ್ ಲಿಸ್ಟರ್‌ಳನ್ನು ಸಮಾಧಿ ಮಾಡಿದ ವೆಸ್ಟ್ ಹ್ಯಾಂಪ್‌ಸ್ಟೆಡ್ ರುದ್ರಭೂಮಿಯಲ್ಲೇ ಅವನ ಅಂತಿಮ ವಿಶ್ರಾಂತಿ ಸ್ಥಳವಾಗಬೇಕೆಂಬುದು ಆತನ ಇಚ್ಛೆಯಾಗಿತ್ತಂತೆ. ಅತ್ಯಂತ ಸರಳ ರೀತಿಯಲ್ಲಿ ಅಂತಕ್ರಿಯೆಗಳು ಜರುಗಿದವು. ಆಗ್ನೀಸ್‌ಳ ಸಮಾಧಿಯ ಪಕ್ಕದಲ್ಲೇ ಲಿಸ್ಟರ್‌ನನ್ನು ಸಮಾಧಿ ಮಾಡಲಾಯಿತು. ಅಂತ್ಯಕ್ರಿಯೆ ತೀರಾ ಖಾಸಗಿಯಾಗಬೇಕೆಂಬುದು ಅವನ ಇಚ್ಛೆಯಾಗಿದ್ದರೂ ಬ್ರಿಟಿಷ್ ಸರ್ಕಾರದ ಉನ್ನತ ಅಧಿಕಾರಿಗಳು ಮತ್ತು ಸಹೋದ್ಯೋಗಿಗಳು ಹಾಜರಿದ್ದು ತಮ್ಮ ಅಂತಿಮ ಗೌರವ ಸಲ್ಲಿಸಿದರು.

ಲಾರ್ಡ್ ಜೋಸೆಫ್ ಲಿಸ್ಟರ್‌ನಂತಹ ಮಹಾಪುರುಷನ ಜೀವನ ಸರಳವಾಗಿ ಕೊನೆಗೊಂಡಿತು. ಆದರೆ ಲಿಸ್ಟರ್ ಜೀವನದ ಉದಾತ್ತ ಧ್ಯೇಯಗಳು ಮತ್ತು ಸಾಧನೆಗಳು ಶಾಶ್ವತವಾಗಿ ಉಳಿದುಕೊಂಡಿವೆ.

# ೧೭. ಉಪಸಂಹಾರ

ರೋಗ ರುಜಿನಗಳು ಅನಾದಿಯಿಂದಲೂ ಇದ್ದು ಅವುಗಳಿಗೆ ಚಿಕಿತ್ಸೆಗಳೂ ಇರುತ್ತಿದ್ದವೆನ್ನಬಹುದಾದರೂ, ಸುಮಾರು ಹದಿನೆಂಟನೆಯ ಶತಮಾನದ ಆದಿಯವರೆಗೂ ವೈದ್ಯಕೀಯ ಕ್ಷೇತ್ರದಲ್ಲಿ ಅಷ್ಟೇನೂ ಪ್ರಗತಿ ಕಂಡು ಬಂದಿರಲಿಲ್ಲ. ಚಿಕಿತ್ಸೆಗಳು ಬಹುಪಾಲು ಯಾವುದೇ ಸಿದ್ಧಾಂತವನ್ನವಲಂಬಿಸಿರದೆ, ಕೆಲವರ ಅನುಭವ ಜ್ಞಾನದ ಪ್ರತಿಫಲಗಳಾಗಿರುತ್ತಿದ್ದವಷ್ಟೆ. ಸುಮಾರು ಕ್ರಿ. ಪೂ 400ರ ಸಮಯದಲ್ಲಿದ್ದ ಆಧುನಿಕ ವೈದ್ಯ ಪಿತಾಮಹನೆನಿಸಿದ್ದ ಹಿಪ್ಪೋಕ್ರೇಟಿಸ್ ಪ್ರತಿಪಾದಿಸಿದ್ದ ತತ್ವಗಳ ಆಚರಣೆ ಈ ಸಮಯದಲ್ಲಿ ಪ್ರಚಾರಕ್ಕೆ ಬರಲಾರಂಭಿಸಿದವು. ರೋಗ ಲಕ್ಷಣಗಳ ಕರಾರುವಾಕ್ಕಾದ ಅವಲೋಕನ ಮತ್ತು ಅವುಗಳಿಂದುಂಟಾಗಬಹುದಾದ ಅನುಮಾನಗಳಿಂದ ವ್ಯಾಧಿಯ ಬಗೆಗೆ ನಿರ್ಧಾರ ತೆಗೆದುಕೊಳ್ಳಬೇಕೆಂಬ ಹಿಪ್ಪೋಕ್ರೇಟಿಸ್ ಉಕ್ತಿಯನ್ನು, ಈ ಕಾಲದ ವೈದ್ಯರು ಅಳವಡಿಸಿ ಕೊಳ್ಳುತ್ತಿದ್ದರೆನ್ನಬಹುದು. ಇದರಿಂದ ಕೆಲವು ವ್ಯಾಧಿಗಳ ಬಾಹ್ಯ ಲಕ್ಷಣಗಳನ್ನು ಕರಾರುವಾಕ್ಕಾಗಿ ಗುರುತಿಸಲು ಸಾಧ್ಯವಾಗುತ್ತಿತ್ತು. ಇಟಲಿಯ ಗಿಯೋವಾನಿ ಮಾರ್ಗಾಗ್ನಿ (GIOVANNI MORGAGNI) ಇನ್ನೂ ಮುಂದುವರಿದು ದೇಹದ ಒಳಗಡೆ ಇರುವ ಅವಯವಗಳನ್ನೂ ಅವಲೋಕಿಸ ಲಾರಂಭಿಸಿದ. ಯಾವುದೇ ರೋಗ ಪೀಡಿತರಾಗಿದ್ದವರ ಒಳ ಅವಯವಗಳಲ್ಲಿ ಆಗಬಹುದಾದ ಬದಲಾವಣೆಗಳನ್ನು ವೀಕ್ಷಿಸಲು ಇದರಿಂದ ಸಹಾಯವಾಯಿತು. ಕಾಯಿಲೆಯ ಬಾಹ್ಯ ಲಕ್ಷಣಗಳಿಗೂ ಅದರಿಂದ ಒಳಗಡೆ ಅವಯವಗಳಲ್ಲುಂಟಾಗುತ್ತಿದ್ದ ವ್ಯತ್ಯಾಸಗಳಿಗೂ ಸಂಬಂಧ ಕಲ್ಪಿಸಲು ಸಾಧ್ಯವಾಯಿತು. ಉದಾಹರಣೆಗೆ ಹಿಪ್ಪೊಕ್ರೇಟಿಸ್ ಕ್ಷಯರೋಗ ಮತ್ತು ಪುಪ್ಪಸದುರಿತ (PNEUMONIA) ಗಳಲ್ಲಿ ಬೇರೆ ಬೇರೆ ತರಹದ ಬಾಹ್ಯಲಕ್ಷಣಗಳು ಇರುವುದನ್ನು ಗುರುತಿಸಿದ್ದನು. ಆದರೆ ಮಾರ್ಗಾಗ್ನಿ ಈ ಎರಡು ಪರಿಸ್ಥಿತಿಗಳಿಂದ ಶ್ವಾಸಕೋಶಗಳಲ್ಲಾಗುತ್ತಿದ್ದ ವ್ಯತ್ಯಾಸಗಳನ್ನು ಗುರುತಿಸಿ ಅವುಗಳಿಂದ ಪ್ರಕಟವಾಗುತ್ತಿದ್ದ ಬಾಹ್ಯಲಕ್ಷಣಗಳಿಗೆ ಸರಿಯಾದ ವಿವರಣೆಗಳನ್ನು ನೀಡಲು ಸಮರ್ಥನಾದ. ಮಾರ್ಗಾಗ್ನಿ ತನ್ನ ರೋಗಿಗಳು ಜೀವಂತವಾಗಿರುವಾಗ ಪ್ರಕಟವಾಗಿರುತ್ತಿದ್ದ ಬಾಹ್ಯ ಲಕ್ಷಣಗಳನ್ನು ಗುರುತಿಸಿಟ್ಟುಕೊಂಡು, ಅವರೇನಾದರೂ ಸತ್ತರೆ ಶವ ಪರೀಕ್ಷೆ ಜರುಗಿಸಿ ಅವಯವಗಳಲ್ಲಾಗಿರುತ್ತಿದ್ದ ಬದಲಾವಣೆಗಳಿಗೆ ಸಂಬಂಧ ಕಲ್ಪಿಸಲು

ಪ್ರಯತ್ನಿಪಡುತ್ತಿದ್ದ. ಈ ತರಹೆಯ ವೀಕ್ಷಣೆಗಳಿಂದ ಮಾರ್ಗಾಗ್ನಿ ಒಂದು ವ್ಯಾಧಿಯಲ್ಲಿ ಪ್ರಕಟವಾಗುವ ರೋಗಲಕ್ಷಣಗಳಿಗೂ ಅದು ಉದ್ಭವವಾಗುವ ಅವಯವಗಳಿಗಿರುವ ಸಂಬಂಧವನ್ನು ಸಾದರಪಡಿಸುವಲ್ಲಿ ಅದೇ ಮೊದಲ ಬಾರಿಗೆ ಯಶಸ್ವಿಯಾದವನೆನ್ನಬಹುದು. ಪ್ರಸ್ತುತ ಭದ್ರ ನೆಲೆಯಾಗಿ ನಿಂತಿರುವ "ಕ್ಲಿನಿಕಲ್ ವೈದ್ಯಶಾಸ್ತ್ರ" (CLINICAL MEDICINE) ಅದರಿಂದಲೇ ಉದಯವಾಗಲು ಸಾಧ್ಯವಾಯಿತು.

ಹೀಗೆ ಮಾರ್ಗಾಗ್ನಿ ತೋರಿಸಿಕೊಟ್ಟ ದಾರಿ ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಇತರ ಹಲವು ಕಾಣ್ಕೆಗಳಿಗೆ ದಾರಿ ದೀಪವಾಯಿತು. ಆ ಶತಮಾನದ ಇನ್ನೊಂದು ಅತಿ ಮಹತ್ವದ ಶೋಧನೆ ವಾಕ್ಸಿನೇಷನ್ (VACCINATION) ಜಾರಿಗೆ ಬಂದದ್ದು ಮುಂದಿನ ಮೈಲುಗಲ್ಲಾಯಿತು. ಎಡ್ವರ್ಡ್ ಜೆನ್ನರ್ ಜಾರಿಗೆ ತಂದ ಈ ಪದ್ಧತಿ ವೈದ್ಯಕೀಯ ಕ್ಷೇತ್ರದಲ್ಲಿ ಕ್ರಾಂತಿಕಾರಕ ಪರಿಣಾಮಗಳನ್ನುಂಟುಮಾಡಿತು. ವೈದ್ಯಕೀಯ ಕ್ಷೇತ್ರದಲ್ಲಿ ಹಲವು ಬಗೆಯ ವೈಜ್ಞಾನಿಕ ತನಿಖೆ ಮತ್ತು ಅವಲೋಕನಗಳು ಜರುಗಲಾರಂಭಿಸಿದವು. ಈ ದಿಸೆಯಲ್ಲಿ ಹಯಾಸಿಂಥ್ ಲಿನ್‌ಕ್ (1781-1826) ಹೃದಯ ಮತ್ತು ಶ್ವಾಸಕೋಶಗಳಲ್ಲಿ ಉದ್ಭವಿಸುವ ಶಬ್ದಗಳನ್ನು ಕೇಳುವ ಸ್ಟೆಥಾಸ್ಕೋಪ್ ಕಂಡು ಹಿಡಿದಿದ್ದು; ಕ್ಲಾಡ್ ಬರ್ನಾರ್ಡ್ (CLAUDE BERNARD) ವೈದ್ಯಕೀಯ ಕ್ಷೇತ್ರದಲ್ಲಿ ಪ್ರಯೋಗ-ಪರೀಕ್ಷೆಗಳ ಮಹತ್ವನ್ನು ಸಾದರಪಡಿಸಿದ್ದು, ಮುಂತಾದವು ವೈದ್ಯ ವೃತ್ತಿಯು ಒಂದು ವಿಜ್ಞಾನವಾಗಿ ಬೆಳವಣಿಗೆಯಾಗುವ ಸಾಧ್ಯತೆಗಳನ್ನು ತೋರಿಸಿದವು. ಹೀಗೆ ವೈದ್ಯ ವಿಜ್ಞಾನದ ಎಲ್ಲೆಗಳು ವಿಸ್ತರಿಸಲ್ಪಟ್ಟರೂ ಅವುಗಳಿಂದ ವೈಯಕ್ತಿಕವಾಗಿ ರೋಗಿಗೆ ತಕ್ಷಣದ ಪ್ರಯೋಜನಗಳಾಗುತ್ತಿರಲಿಲ್ಲ. ಮುಂದೆ ಅರಿವಳಿಕಾ ಪದ್ಧತಿಯ ಆವಿಷ್ಕಾರ (1846) ಹಾಗೂ ಬಾಣಂತಿ ಜ್ವರದ ಕಾರಣ ಸೋಂಕಿನಿಂದುಂಟಾಗುವುದು ಶ್ರುತ ಪಟ್ಟಾಗ ಬಹುಪಾಲು ಜನರಿಗೆ ಅವುಗಳಿಂದ ವೈಯಕ್ತಿಕ ಪ್ರಯೋಜನಗಳುಂಟಾಗಲಾರಂಭಿಸಿದವು.

ಈ ಎಲ್ಲಾ ಮುನ್ನಡೆಗಳಿಗೆ ಕಳಶ ಪ್ರಾಯವಾಗಿ ಜೋಸೆಫ್ ಲಿಸ್ಟರ್ ರೂಪಿಸಿದ ಆಂಟಿಸೆಪ್ಟಿಕ್ ನಿಯಮಗಳ ಆಚರಣೆ (1867) ಜಾರಿಗೆ ಬಂದಿತು. ಮೂಳೆಗಳ ಸರಳ ಮುರಿತ ಮತ್ತು ಸಂಯುಕ್ತ ಮುರಿತಗಳು ವಾಸಿಯಾಗುವುದರಲ್ಲಾಗುತ್ತಿದ್ದ ವ್ಯತ್ಯಾಸಗಳು ಲಿಸ್ಟರ್‌ನ ಗಮನ ಸೆಳೆದವು. ಹೊರಗಿನ ವಾತಾವರಣಕ್ಕೆ ತೆರೆದ ಗಾಯಗಳು ವಾಸಿಯಾಗುವುದಕ್ಕೂ ಹಾಗೆ

ತೆರೆಯದೆ ಮುಚ್ಚಿಕೊಂಡಿರುವ ಗಾಯಗಳು ವಾಸಿಯಾಗುವ ರೀತಿಗಳಲ್ಲಿನ ವ್ಯತ್ಯಾಸಗಳು, ಅವನನ್ನು ಯೋಚನೆಗೀಡು ಮಾಡಿದವು. ಅದೇ ಸಮಯದಲ್ಲಿ ಲೂಯಿ ಪ್ಯಾಶ್ಚರ್ ಗಾಳಿಗೆ ತೆರೆದಿಟ್ಟ ದ್ರಾಕ್ಷಾರಸದಲ್ಲಿ ಹುದುಗೇಳುವ ಕ್ರಿಯೆಯಿಂದ ಮದ್ಯಸಾರ ಉದ್ಭವ ರೀತಿಯನ್ನು ವಿವರಿಸಿದ್ದು, ಹೊರಗೆ ತೆರೆದ ಗಾಯಗಳಲ್ಲಿ ಕೀವಾಗುವುದಕ್ಕೂ ಸಾಮ್ಯವಿರುವುದನ್ನು ಲಿಸ್ಟರ್ ಗ್ರಹಿಸಿದ್ದು ಅವನ ಸೂಕ್ಷ್ಮ ಅವಲೋಕನ ಚಾತುರ್ಯಕ್ಕೆ ಸಾಕ್ಷಿಯೆನ್ನಬಹುದು. ವಾತಾವರಣದಲ್ಲಿರ ಬಹುದಾದ ಸೂಕ್ಷ್ಮ ಜೀವಾಣುಗಳೇ ಹುದುಗೇಳುವ ಕ್ರಿಯೆ ಮತ್ತು ಕೀವಾಗುವ ಪರಿಸ್ಥಿತಿಗಳಿಗೂ ಕಾರಣವಾಗಿರಬಹುದೆಂಬುದು ಪ್ಯಾಶ್ಚರ್ ಮತ್ತು ಲಿಸ್ಟರ್‌ರ ಒಮ್ಮತದ ಅಭಿಪ್ರಾಯವಾದುದೂ ಸೋಜಿಗವೆ. ಏಕೆಂದರೆ ಅವರು ಪ್ರತಿಪಾದಿಸುತ್ತಿದ್ದ ಸೂಕ್ಷ್ಮ ಜೀವಾಣುಗಳನ್ನು ಅವರಾಗಲೀ ಅಥವಾ ಬೇರೆ ವಿಜ್ಞಾನಿಗಳಾಗಲೀ ಆ ತನಕ ತೋರಿಸಿರಲೇ ಇಲ್ಲ. ಮುಂದೆ ರಾಬರ್ಟ್ ಕಾಖ್ ಅವುಗಳನ್ನು ಪ್ರದರ್ಶಿಸಿದಾಗ ಆಂಟಿಸೆಪ್ಟಿಕ್ ಸತ್ವಗಳ ಹಿಂದಿನ ಮರ್ಮ ಎಲ್ಲರಿಗೂ ಅರ್ಥವಾಯಿತು. ಹಾಗೆಯೇ ಇಂತಹ ಸೂಕ್ಷ್ಮ ಜೀವಾಣುಗಳ ಸೋಂಕು ಕೇವಲ ವಾತಾವರಣದಿಂದ ಮಾತ್ರ ಬರಬೇಕಾಗಿಲ್ಲ; ಕೊಳಕಾದ ಕೈಗಳು ಬಟ್ಟೆ ಬರೆ ಮತ್ತು ಸಲಕರಣೆಗಳಿಂದ ಕೂಡಾ ಬರಬಹುದೆಂಬುದು ಸಾಬೀತಾಯಿತು. ಬರೇ ಆಂಟಿಸೆಪ್ಟಿಕ್ ನಿಯಮಗಳ ಆಚರಣೆ ಜೊತೆಗೆ ಏಸೆಪ್ಟಿಕ್ ನಿಯಮಗಳು ಒಂದಕ್ಕೊಂದು ಪೂರಕವಾಗಿ ಆಚರಿಸಲ್ಪಡುತ್ತವೆ. ಈ ಬೆಳವಣಿಗೆಗಳಿಂದ ಗಾಯಗಳಲ್ಲಿ ಕೀವಾಗುವ ಪ್ರಮಾಣ ತುಂಬಾ ಕಡಿಮೆಯಾಗಿ, ಅನಾದಿಯಿಂದಲೂ ಹೆಚ್ಚಿನ ಪ್ರಗತಿಯನ್ನು ಸಾಧಿಸಲಾಗದಿದ್ದ ಶಸ್ತ್ರ ಚಿಕಿತ್ಸಾ ವಿಧಾನ ಕಳೆದ ಶತಮಾನದ ಹೊತ್ತಿಗೆ ಚೇತರಿಸಿಕೊಂಡು ವಿವಿಧ ಪ್ರಕಾರಗಳಲ್ಲಿ ಅಭಿವೃದ್ಧಿ ಹೊಂದುವಂತಾಯಿತು.

ಆಂಟಿಸೆಪ್ಟಿಕ್ - ಏಸೆಪ್ಟಿಕ್ ವಿಧಾನಗಳು ಆಚರಣೆಗೆ ಬಂದಿದ್ದರೂ, ಗಾಯಗಳಲ್ಲಿ ನಂಜಾಗುವುದಕ್ಕೆ ಮೊದಲೇ ಸೇರಿಕೊಂಡಿರಬಹುದಾದ ರೋಗಾಣುಗಳನ್ನು ನಾಶಪಡಿಸುವುದು ಅಸಾಧ್ಯವಾಗುತ್ತಿತ್ತು. ಈ ಶತಮಾನದ ಪೂರ್ವಾರ್ಧದಲ್ಲಿ ಅಲೆಗ್ಸಾಂಡರ್ ಫ್ಲೆಮಿಂಗ್ ಮತ್ತು ಕೆಲವು ಬ್ರಿಟನ್ನಿನ ವೈದ್ಯ ವಿಜ್ಞಾನಿಗಳು ಆವಿಷ್ಕರಿಸಿದ ಜೀವಿರೋಧಕ ಮದ್ದುಗಳ (ANTIBIOTICS) ಅಂತಹ ರೋಗಾಣುಗಳನ್ನು ನಾಶಪಡಿಸುವಲ್ಲಿ ಕ್ರಾಂತಿಕಾರಕ ಫಲಿತಾಂಶಗಳನ್ನುಂಟು ಮಾಡಿದವು. ಅವುಗಳ ಉಗಮದಿಂದ ಶಸ್ತ್ರ ಚಿಕಿತ್ಸಾ ವಿಧಾನಗಳೇ ಅಲ್ಲದೇ ಇಡೀ ವೈದ್ಯಕೀಯ ಕ್ಷೇತ್ರಕ್ಕೆ ವಿದ್ಯುತ್ ಸಂಚಾರ

ವಾದಂತಾಯಿತು. ಶಸ್ತ್ರ ವೈದ್ಯರು ಪ್ರಸ್ತುತ ಲಭ್ಯವಿದ್ದ ಅರಿವಳಿಕೆ ವಿಧಾನದ ಬಳಕೆಯಿಂದ ರೋಗಿಗೆ ನೋವಾಗದಂತೆ ಶಸ್ತ್ರ ಚಿಕಿತ್ಸೆ ಮಾಡುವ ಸುವರ್ಣಾವಕಾಶದಿಂದ, ಆ ತನಕ ಇದ್ದ ಪರಿಮಿತಿಯನ್ನು ವಿಸ್ತರಿಸಿಕೊಂಡರು. ಮುಂದೆ ಆಂಟಿಸೆಪ್ಟಿಕ್ ಏಸ್ಪೆಟಿಕ್ ನಿಯಮಗಳ ಆಚರಣೆಯಿಂದ ಕೀವಾಗುವ ಸಮಸ್ಯೆಯೂ ಪರಿಹಾರವಾಯಿತು. ಆ ದಿಸೆಯಲ್ಲಿ ಜೀವರೋಧಕ ಮದ್ದುಗಳ ಬಳಕೆಯೂ ಹೆಚ್ಚಿನ ಸಹಕಾರ ನೀಡಿತು. ಈಗ ಶಸ್ತ್ರ ಚಿಕಿತ್ಸಾ ವಿಧಾನಗಳ ಬಳಕೆಗೆ ಯಾವುದೇ ಅಡ್ಡಿ ಆತಂಕಗಳು ಇಲ್ಲವಾದವು. ಮಾನವ ಶರೀರದಲ್ಲಿ ಶಸ್ತ್ರ ವೈದ್ಯರ ಪ್ರವೇಶ ನಿಷಿದ್ಧವೆಂದು ಭಾವಿಸಲಾಗಿದ್ದ ಉದರಕೋಶ, ಎದೆಗೂಡು, ಮತ್ತು ತಲೆ ಬುರುಡೆಗಳಂಥ ಪವಿತ್ರ ಹಾಗೂ ನಿಗೂಢ ತಾಣಗಳಿಗೂ ಲಗ್ಗೆ ಹಾಕಿದರು. ಜೀವಾಧಾರ ಅವಯವಗಳಾದ ಶ್ವಾಸಕೋಶ, ಹೃದಯ ಮತ್ತು ಮಿದುಳನ್ನು ಶಸ್ತ್ರಚಿಕಿತ್ಸೆಗೊಳಪಡಿಸಲಾಯಿತು. ಹೃದಯ, ಮೂತ್ರಪಿಂಡ, ಲಿವರ್‌ಗಳು ಶಿಥಿಲಗೊಂಡು ಕಾರ್ಯನಿರ್ವಹಿಸಲು ಸಾಧ್ಯವಿಲ್ಲವೆಂದಾದಾಗ ಅವುಗಳನ್ನೇ ತೆಗೆದು ಇತರರಿಂದ ದಾನವಾಗಿ ಪಡೆದ ಅವಯವಗಳ ನಾಟಿ ಹಾಕುವ (ORGAN TRANS PLANTATION) ಶಸ್ತ್ರ ಚಿಕಿತ್ಸೆಗಳು ಈಗ ಎಲ್ಲೆಡೆ ಜರುಗುತ್ತಿವೆ. ಈ ಎಲ್ಲಾ ಪ್ರಗತಿಗಳಿಗೆ ಅರಿವಳಿಕೆ, ರಕ್ತ ಪೂರಣೆ (BLOOD TRANSFUSION) ಯಂತಹ ವಿಧಾನಗಳು ಬಹಳಷ್ಟು ಸಹಾಯ ಮಾಡಿವೆಯೆನ್ನಬಹುದಾದರೂ ಆಂಟಿಸೆಪ್ಟಿಕ್ ಏಸೆಪ್ಟಿಕ್ ನಿಯಮಗಳ ಉಗಮ ಶಸ್ತ್ರಚಿಕಿತ್ಸಾ ಪದ್ಧತಿಗೆ ನವಚೇತನವನ್ನು ತಂದುಕೊಟ್ಟವು. ಆಧುನಿ ಶಸ್ತ್ರಚಿಕಿತ್ಸಾ ವಿಧಾನ ಜೋಸೆಫ್ ಲಿಸ್ಟರ್‌ನ ನಂತರವೇ ಮರ ಹುಟ್ಟು ಪಡೆದು ಪ್ರವರ್ಧಮಾನಕ್ಕೆ ಬಂದಿತೆಂದೇ ಹೇಳಬಹುದು. ಬಹುಶಃ ಲಿಸ್ಟರ್‌ನಂತಹ ವ್ಯಕ್ತಿಯೊಬ್ಬ ವೈದ್ಯಲೋಕದ ಕ್ಷಿತಿಜದಲ್ಲಿ ಉದಯಿಸದಿದ್ದರೆ, ಈಗ ನಾವು ಅನುಭವಿಸುತ್ತಿರುವ ಸ್ವಾಸ್ಥ್ಯ ಪರಿಸ್ಥಿತಿಯನ್ನು ತಲುಪಲು ಸಾಧ್ಯವಾಗುತ್ತಲೇ ಇರಲಿಲ್ಲ. ಲಿಸ್ಟರ್ ರೂಪಿಸಿದ ಆಂಟಿಸೆಪ್ಟಿಕ್ ನಿಯಮಗಳನ್ನು ಈಗ ಅವಲೋಕಿಸಿದರೆ ತೀರಾ ಸರಳವಾದವಾಗಿ ಕಾಣಿಸುತ್ತವೆ; ನಮ್ಮೆಲ್ಲರ ಜೀವನದಲ್ಲಿ ಪ್ರತಿ ನಿಮಿಷ ನಮಗರಿವಿಲ್ಲದೇ ಆಚರಣೆಯಾಗಿರುತ್ತವೆ. ಆದುದರಿಂದ ಲಿಸ್ಟರ್‌ನ ಆಂಟಿಸೆಪ್ಟಿಕ್ ನಿಯಮಗಳು ಇತ್ತೀಚಿನ ವೈಜ್ಞಾನಿಕ ಸಾಧನೆಗಳೊಡನೆ ಹೋಲಿಸಿದಾಗ ತುಂಬಾ ಪೇಲವವಾಗಿ ಕಾಣಿಸಬಹುದು. ಆದರೆ ಲಿಸ್ಟರ್ ತನ್ನ ನಿಯಮಗಳನ್ನು ಮೊಟ್ಟ ಮೊದಲು ಗ್ಲಾಸ್ಗೋ ಆಸ್ಪತ್ರೆಯಲ್ಲಿ ಜಾರಿಗೆ ತರಲು ಆರಂಭಿಸಿದಾಗ ಅವನಿಗೆ ಎದುರಾಗುತ್ತಿದ್ದ ಅಡೆತಡೆಗಳನ್ನು ಮತ್ತೊಮ್ಮೆ ಅವಲೋಕಿಸಿದರೆ, ಅವನು ಹಿಡಿದ ದಾರಿ ಎಷ್ಟೊಂದು

ದುರ್ಗಮವಾಗಿತ್ತೆನ್ನುವುದರ ಅರಿವಾಗಬಹುದು. ಸಲ್ಲದ ಆರೋಪ ಅವಮಾನಗಳಿಗೆ ಗುರಿಯಾಗಬೇಕಾಯಿತು; ವೈದ್ಯಲೋಕದ ಮುಂದಾಳುಗಳ ಮೂಢನಂಬಿಕೆ, ಅಂಧ ಶ್ರದ್ಧೆ, ಪ್ರತಿಷ್ಠೆ, ಹಠಮಾರಿತನಗಳನ್ನು ಎದುರಿಸಬೇಕಾಯಿತು; ಸ್ವದೇಶದ ವೈದ್ಯರೇ ಆಂಟಿಸೆಪ್ಟಿಕ್ ತತ್ವಗಳನ್ನು ಕಟುವಾಗಿ ವಿರೋಧಿಸಿದರು. ಯುರೋಪಿನ ಹಲವು ಕೇಂದ್ರಗಳಲ್ಲಿ ಲಿಸ್ಟರ್‌ನ ಆಂಟಿಸೆಪ್ಟಿಕ್ ನಿಯಮಗಳನ್ನು ಕಟ್ಟುನಿಟ್ಟಾಗಿ ಆಚರಿಸಿ ಒಳ್ಳೆ ಫಲಿತಾಂಶಗಳನ್ನು ಪ್ರಕಟಿಸುತ್ತಿದ್ದವರಿದ್ದುದೊಂದೇ ಹೊಂಗಿರಣವಾಗಿತ್ತು. ಸೂಕ್ಷ್ಮ ಜೀವಾಣುಗಳ ಇರುವಿಕೆ ಸಾಬೀತಾದ ನಂತರ ಲಿಸ್ಟರ್‌ನ ಮಾರ್ಗದಲ್ಲಿದ್ದ ಎಡರು ತೊಡರುಗಳೆಲ್ಲಾ ಮಂಜುಕರಗಿದಂತೆ ಮಾಯವಾಗಿಬಿಟ್ಟವು. ಬಹುಶಃ ಲಿಸ್ಟರ್‌ನಂತಹ ಸಮಚಿತ್ತದ, ಧೀರೋದಾತ್ತ ವ್ಯಕ್ತಿಯೊಬ್ಬನಿಗೆ ಮಾತ್ರ ಅಂತಹವುಗಳನ್ನು ಎದುರಿಸಲು ಸಾಧ್ಯವಾಯಿತೆನ್ನಬಹುದು. ಅಂತಿಮವಾಗಿ ಲಿಸ್ಟರ್ ತನ್ನ ಗುರಿ ಸಾಧಿಸಿದ. ಅವನ ಹೆಸರು ಮನೆಮಾತಾಯಿತು. ಮಾನವ ಇತಿಹಾಸ ಆ ತನಕ ಕಾಣದಂಥ ''ಮಹಾನ್ ಶಸ್ತ್ರ ವೈದ್ಯ'' (GREATEST SURGEON) ಎಂಬಂಥ ಶಕಪುರುಷನೇ ಆಗಿಬಿಟ್ಟ ಜೋಸಫ್ ಲಿಸ್ಟರ್.

ಜೋಸೆಫ ಲಿಸ್ಟರ್, ಸುಸಂಸ್ಕೃತ, ಶ್ರೀಮಂತ ಮನೆತನದಲ್ಲಿ ಹುಟ್ಟಿ ಬೆಳೆದವನು; ಶಾಂತಿ ಪ್ರಿಯ, ಸೌಹಾರ್ದಭಾವನೆಯ ವಿಶ್ವಮಾನವ ಸಂದೇಶದ ರೂವಾರಿಗಳೆನಿಸಿದ ಕ್ವೇಕರ್ ಪಂಗಡದ ಹಿನ್ನೆಲೆ ವೈಜ್ಞಾನಿಕ ಚಿಂತನೆ ಮತ್ತು ವೈಚಾರಿಕ ಮನೋಭಾವದ ಪರಿಸರದಲ್ಲಿ ಬೆಳೆದವನು. ಬಾಲಕನಾಗಿರುವಾಗಲೇ ಸರಳ, ಸೌಜನ್ಯ, ಶಿಸ್ತಿನ ಜೀವನ ಕ್ರಮ, ಗುರು ಹಿರಿಯರಿಗೆ ವಿಧೇಯತೆ, ಗೌರವ; ಕಷ್ಟ ಸಹಿಷ್ಣುತೆ, ಸದಾ ಜ್ಞಾನಾಭಿವೃದ್ಧಿಯ ಹಂಬಲ, ಕರುಣಾಮಯಿ, ವೈದ್ಯ ವೃತ್ತಿಗೆ ಹೇಳಿ ಮಾಡಿಸಿದಂಥ ವ್ಯಕ್ತಿತ್ವ; ಆರು ಅಡಿಗಳಷ್ಟು ಎತ್ತರ, ಗಂಭೀರ ನೀಳಕಾಯ, ಅಚ್ಚುಕಟ್ಟಾದ ಮೈಕಟ್ಟು, ಗಂಭೀರ ವರ್ತನೆ, ಸಂಯಮದ ನಡವಳಿಕೆ ಕೋಮಲ ದನಿಯ ಕುಶಲ ಸಂಭಾಷಣೆಯ, ಯಾರ ಮನಸ್ಸನ್ನೂ ನೋಯಿಸದ ವಿವೇಚನೆಯ ಮಾತುಕತೆಗಳು; ಸ್ವಲ್ಪ ತಡೆಹಿಡಿದು ಮಾತಾಡುವ ಅಭ್ಯಾಸ ಬಾಲ್ಯದಿಂದಲೇ ರೂಢಿಯಾಗಿದ್ದರೂ, ಯಾರಿಗೂ ಅಭಾಸವಾಗದಂತೆ ತಕ್ಷಣ ವಾಕ್‌ಪ್ರವಾಹದ ಮುಂದುವರಿಕೆ. ವಿಕ್ಟೋರಿಯನ್ ಯುಗದ ವಾಡಿಕೆಯಂತೆ ಕಪ್ಪು ಬಣ್ಣದ ಕೋಟು (FROCK COAT) ಬಿಲ್ಲಾಕಾರದ ಕಂಠವಸ್ತ್ರ (BOW TIE) ಅವನ ಉಡುಪು. ಮುಖ ಕ್ಷೌರ ಮಾಡಿಕೊಳ್ಳುತ್ತಿದ್ದರೂ ಎರಡೂ ಕಿವಿಗಳ ಪಕ್ಕ

ಇಳಿಬಿದ್ದಿರುವ ಕೂದಲು, ಲಿಸ್ಟರ್ ವದನಕ್ಕೆ ವಿಶಿಷ್ಟ ರೀತಿಯ ಕಳೆಯನ್ನುಂಟು ಮಾಡಿತು. ನೋಡಿದಾಕ್ಷಣ ಆಕರ್ಷಿಸುವ, ಗೌರವ ಸೂಸುವ ವ್ಯಕ್ತಿತ್ವವೇ ಮೂರ್ತಿವೆತ್ತಂತಿತ್ತು. ಸಹಾಯಕರು ಮತ್ತು ವಿದ್ಯಾರ್ಥಿಗಳೊಡನೆ ಯಾವುದೇ ನಿರ್ಬಂಧವಿಲ್ಲದೆ; ಉದಾರ ಭಾವನೆಯಿಂದ ಬೆರೆತು ಕಾರ್ಯಮಗ್ನನಾಗಿರುತ್ತಿದ್ದರೂ, ಅವರೆಲ್ಲಾ ತುಂಬಾ ಗೌರವ ಭಾವನೆಯಿಂದಲೇ ವರ್ತಿಸುತ್ತಿದ್ದರು. ಕೈ ಕೆಳಗಿನವರು ಅಕ್ಷಮ್ಯ ತಪ್ಪುಗಳನ್ನೆಸಗಿದ್ದರೂ ಯಾರನ್ನೂ ಬೈಯುತ್ತಿರಲಿಲ್ಲ, ಅವನ ನಿಟ್ಟುಸಿರೇ ಅವರಿಗೆ ಎಚ್ಚರಿಕೆಯ ಸಂಕೇತವಾಗಿರುತ್ತಿತ್ತಂತೆ. ಬಾನಿನಲ್ಲಿ ಹಲವು ನಕ್ಷತ್ರಗಳು ಹೊಳೆಯುತ್ತಿರಬಹುದಾದರೂ ಲಿಸ್ಟರ್ ನಕ್ಷತ್ರ ಬೆಳ್ಳಿ ಚುಕ್ಕೆಯಂತೆ ಅದರದೇ ಸ್ವಯಂ ಪ್ರಕಾಶದಿಂದ ಹೊಳೆಯುತ್ತಿತ್ತೆಂದು ಅವನ ನಿಕಟವರ್ತಿಗಳ ಅಂಬೋಣ.

ಆಗ್ನೀಸ್ ಲಿಸ್ಟರ್, ಎಲ್ಲಾ ವಿಧದಲ್ಲೂ ಅವನಿಗೆ ಅನುರೂಪಳಾಗಿ, ಅವನ ನೆರಳಿನಂತೆಯೇ ಜೀವನ ಸಾಗಿಸಿದಳು. ಜೀವನ ಸಂಜೆಯಲ್ಲಿ ಆಕೆಯ ಅಗಲಿಕೆ ಲಿಸ್ಟರ್‌ಗೆ ತುಂಬಾ ಆಘಾತವನ್ನುಂಟು ಮಾಡಿತು. ಆದರೂ ಕೊನೇ ಘಳಿಗೆಯವರೆಗೂ ತನ್ನ ಕರ್ತವ್ಯವನ್ನು ದಕ್ಷತೆಯಿಂದ ನಿರ್ವಹಿಸಿದನೆಂದೇ ಹೇಳಬಹುದು.

ಸಂಶೋಧಕರನೇಕರು ಎಷ್ಟೇ ಪ್ರತಿಭಾವಂತರಾಗಿದ್ದು, ಅತ್ಯಂತ ಮಹತ್ವದ ಸಂಶೋಧನೆಗಳನ್ನು ಮಾಡಿದ್ದರೂ, ಸಾಧನೆಗಳ ಮಹತ್ವ ಅವರ ಜೀವಮಾನದಲ್ಲೇ ಗುರುತಿಸಲ್ಪಟ್ಟವರು ಅಪರೂಪವೇ ಸರಿ. ಬಹಳಷ್ಟು ಅಂತಹ ಪ್ರತಿಭಾವಂತರು ಗತಿಸಿ ಹಲವು ವರ್ಷಗಳ ನಂತರ ಅವರ ಶೋಧನೆಯ ಮಹತ್ವ ಬೆಳಕಿಗೆ ಬಂದು, ಗೌರವಿಸಲ್ಪಡುವುದನ್ನು ನೋಡಬಹುದು. ಜೀವಿಸಿದ್ದ ಕಾಲಕ್ಕಿಂತಲೂ ಬಹಳ ಮುಂದಿದ್ದವರೆಂದು ಅವರ ಬಗೆಗೆ ಹೇಳುವುದು ವಾಡಿಕೆ. ಆದರೆ ಜೋಸೆಫ್ ಲಿಸ್ಟರ್ ಈ ದಿಸೆಯಲ್ಲಿ ಅದೃಷ್ಟವಂತನೆಂದೇ ಹೇಳಬೇಕು. ಜೀವಿತ ಕಾಲದಲ್ಲಿ ಅವನು ನಿರೂಪಿಸಿದ ಆಂಟಿಸೆಪ್ಟಿಕ್ ನಿಯಮಗಳು ಪ್ರಪಂಚದಾದ್ಯಂತ ಬಳಕೆಗೆ ಬಂದು, ವೈದ್ಯಕೀಯ ಕ್ಷೇತ್ರದ ವಿದ್ಯಮಾನಗಳ ಗತಿಯೇ ಬದಲಾಯಿತು. ಶಸ್ತ್ರವೈದ್ಯ ಪದ್ಧತಿಯಂತೂ ಆಂಟಿಸೆಪ್ಟಿಕ್ ನಿಯಮಗಳು ಆಚರಣೆಗೆ ಬರದಿದ್ದಲ್ಲಿ ಶಸ್ತ್ರಚಿಕಿತ್ಸಾ ಪದ್ಧತಿ ಈಗ ತಲುಪಿರುವ ಮಟ್ಟವನ್ನು ತಲುಪಲು ಸಾಧ್ಯವಾಗುತ್ತಿರಲಿಲ್ಲ. ಬ್ರಿಟನ್ನಿನಲ್ಲಿ ಲಭಿಸಬಹುದಾದ ಎಲ್ಲಾ ಅತ್ಯುನ್ನತ ಗೌವರ ಸನ್ಮಾನಗಳಿಂದ ಲಿಸ್ಟರ್ ಅಲಂಕೃತನಾಗಿದ್ದ. ಜೊತೆಗೆ ಪ್ರಪಂಚದ ಎಲ್ಲಾ ಕಡೆಗಳಿಂದ ಸುಮಾರು

ಎಂಬತ್ತು ಗೌರವ ಸನ್ನದುಗಳು ಲಭಿಸಿದ್ದವು. ಒಂದು ಕಾಲದಲ್ಲಿ ಕಟುವಾಗಿ ವಿರೋಧಿಸುತ್ತಿದ್ದ ಬ್ರಿಟಿಷ್ ಶಸ್ತ್ರ ವೈದ್ಯ ಸಮುದಾಯ ಅವನನ್ನು ಎಲ್ಲಾ ಕಾಲಕ್ಕೂ ಸಲ್ಲುವ ಮಹಾನ್ ಶಸ್ತ್ರ ವೈದ್ಯನೆಂದು ಪರಿಗಣಿಸಿದರು. ಅವರ ಮುಖವಾಣಿ ಪತ್ರಿಕೆಯಾದ (BRITISH JOURNAL OF SURGERY) ಯ ಮುಖ ಪುಟದಲ್ಲಿ ಲಿಸ್ಟರ್‌ನ ಮುಖದ ಪಾರ್ಶ್ವ ಚಿತ್ರ (PROFILE) ಶಸ್ತ್ರ ವೈದ್ಯ ವೃತ್ತಿಯ ಲಾಂಛನದಂತೆ ಇಂದಿಗೂ ರಾರಾಜಿಸುತ್ತಿರುವುದನ್ನು ನೋಡಬಹುದು. ಎಲ್ಲಕ್ಕಿಂತ ಮಿಗಿಲಾಗಿ ಪ್ರಸ್ತುತ ಪ್ರಪಂಚದಾದ್ಯಂತ ಪ್ರತಿದಿನ ಜರುಗಿತ್ತಿರುವ ಎಲ್ಲಾ ಹಿರಿಯ-ಕಿರಿಯ ಶಸ್ತ್ರ ಚಿಕಿತ್ಸೆಗಳೆಲ್ಲಾ ಆಂಟಿಸೆಪ್ಟಿಕ್ ಯುಗ ಪ್ರವರ್ತಕ ಜೋಸೆಫ್ ಲಿಸ್ಟರ್‌ನನ್ನು ನೆನಪಿಗೆ ತರುವ ಚಿರ ಸ್ಮಾರಕಗಳೆಂದರೆ ಅತಿಶಯೋಕ್ತಿಯಲ್ಲ.

# ಪಾರಿಭಾಷಿಕ ಪದಗಳು

ವಿಜ್ಞಾನ ಮತ್ತು ತಂತ್ರಜ್ಞಾನಗಳ ಬೆಳವಣಿಗೆಯು ಮನುಷ್ಯ ಕುಲವನ್ನೆಲ್ಲ ಒಂದಾಗಿ ಬೆಸೆಯುತ್ತಿವೆ. ಯಾವುದೇ ನಾಡಿನಲ್ಲಿ ಮನುಷ್ಯನು ಗೆದ್ದುಕೊಂಡ ಜ್ಞಾನವು ಇಡೀ ಮನುಕುಲಕ್ಕೆ ಸೇರಿದ ಸಂಪತ್ತಾಗಬೇಕು. ಇಂತಹ ಜ್ಞಾನವನ್ನು ಅರಗಿಸಿಕೊಳ್ಳಲು ಓದುಗನಿಗೆ ಅದು ತನ್ನ ಭಾಷೆಯಲ್ಲೆ ಲಭ್ಯವಾಗಬೇಕು, ಅದನ್ನು ನಿರೂಪಿಸುವ ಕಾರ್ಯದಲ್ಲಿ ಭಾಷೆಯೂ ಬೆಳೆಯುತ್ತದೆ.

ನಾಡಿನ ಇಂದಿನ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸಂದರ್ಭದಲ್ಲಿ ಕನ್ನಡಿಗರಿಗೆ ಅಗತ್ಯವಾದ ಪುಸ್ತಕಗಳನ್ನು ಗುರುತಿಸಿ ಅವನ್ನು ಸಮರ್ಥರಾದವರಿಂದ ಬರೆಸಿ ಪ್ರಕಟಿಸುವುದು ಕನ್ನಡ ಪುಸ್ತಕ ಪ್ರಾಧಿಕಾರದ ಕರ್ತವ್ಯಗಳಲ್ಲಿ ಒಂದು. ಈ ಯೋಜನೆಯನ್ನು ಕನ್ನಡ ಪುಸ್ತಕ ಪ್ರಾಧಿಕಾರವು ಸಂತೋಷದಿಂದ ಕೈಗೊಂಡಿದೆ.

ಈ ಮಾಲೆಯ ಪ್ರತಿಪುಸ್ತಕವು ಅಚ್ಚಿನಲ್ಲಿ 1/8 ಕಿರೀಟಾಕಾರದ ಸುಮಾರು 200 ಪುಟಗಳಷ್ಟು ಇರುತ್ತದೆ. ಸುಮಾರು 50 ಪುಟಗಳಷ್ಟು ಭಾಗದಲ್ಲಿ ವಿಜ್ಞಾನಿಯ ಜೀವನ ಚರಿತ್ರೆಯನ್ನು ನಿರೂಪಿಸಿ ಉಳಿದ ಭಾಗದಲ್ಲಿ ಅವರ ವೈಜ್ಞಾನಿಕ ಕಾರ್ಯ ಮತ್ತು ಸಾಧನೆಗಳನ್ನು ವಿವರಿಸಲಾಗುವುದು.

ಈ ಪುಸ್ತಕವನ್ನು ಅತ್ಯಂತ ಸಂತೋಷದಿಂದ ಕನ್ನಡಿಗರ ಕೈಯಲ್ಲಿಡುತ್ತಿದ್ದೇವೆ. ಈ ಮಾಲೆ ನಾಡು, ನುಡಿಗಳಿಗೆ ಅರ್ಪಿಸಿದ ನಂದಾದೀಪವಾಗಲಿ ಎಂದು ಹಾರೈಸುತ್ತೇವೆ.